# ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳು

(ಮಾಸ್ಟರ್ ಆಫ್ ಫಿಲಾಸಫಿ (ಎಂಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢಪ್ರಬಂಧ)


ಸಂಶೋಧಕ

ವೆಂಕಟೇಶ್ ಬಿ.ಟಿ.

ಮಾರ್ಗದರ್ಶಕರು

ಪ್ರೊ. ರಹಮತ್ ತರೀಕೆರೆ

ಪ್ರಾಧ್ಯಾಪಕರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬


೨೦೦೯-೧೦

# ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳು

(ಮಾಸ್ಟರ್ ಆಫ್ ಫಿಲಾಸಫಿ (ಎಂಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢಪ್ರಬಂಧ)

ಸಂಶೋಧಕ

ವೆಂಕಟೇಶ್ ಬಿ.ಟಿ.

ಮಾರ್ಗದರ್ಶಕರು

ಪ್ರೊ. ರಹಮತ್ ತರೀಕೆರೆ

ಪ್ರಾಧ್ಯಾಪಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೦೯-೧೦



802 A

## ಮಾರ್ಗದರ್ಶಕರ ದೃಢೀಕರಣ ಪತ್ರ

**ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳು** ಎಂಬ ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂಫಿಲ್ ಪದವಿಗಾಗಿ **ವೆಂಕಟೇಶ್ ಬಿ.ಟಿ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಪ್ರೊ. ರಹಮತ್ ತರೀಕೆರೆ**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 13/09/2010

# ಸಂಶೋಧಕರ ಪ್ರಮಾಣ ಪತ್ರ

**ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳು** ಎಂಬ ಈ ಪ್ರಬಂಧವನ್ನು **ಪ್ರೊ. ರಹಮತ್ ತರೀಕೆರೆ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂಫಿಲ್ ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ವೆಂಕಟೇಶ್. ಬಿ.ಟಿ.

**ವೆಂಕಟೇಶ್ ಬಿ.ಟಿ.**
ಸಂಶೋಧಕ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: ೧೩/೦೮/೨೦೧೫

# ಪರಿವಿಡಿ

# ಅಧ್ಯಾಯ ೧

# ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳು

## ೧.೧. ಪ್ರವೇಶ

ಕನ್ನಡ ಸಾಹಿತ್ಯಕ್ಕೆ ಒಂದೂವರೆ ಸಾವಿರ ವರ್ಷಗಳ ಇತಿಹಾಸವಿದೆ. ಆಧುನಿಕ ಕನ್ನಡ ಸಾಹಿತ್ಯಕ್ಕೆ ಒಂದು ಶತಮಾನದ ಇತಿಹಾಸವಿದೆ. ಸಣ್ಣಕಥೆ, ಕಾದಂಬರಿ, ಕಾವ್ಯ ಮುಂತಾದ ಹಲವಾರು ಪ್ರಕಾರಗಳಿಂದ ಆಧುನಿಕ ಕನ್ನಡ ಸಾಹಿತ್ಯ ಸಮೃದ್ಧವಾಗಿದೆ. ಇವುಗಳಲ್ಲಿ ಸಾಹಿತ್ಯ ವಿಮರ್ಶೆಯು ಒಂದು ಪ್ರಮುಖ ಪ್ರಕಾರವಾಗಿದೆ.

ಟಿ.ಎಸ್.ವೆಂಕಣ್ಣಯ್ಯ, ಬಿ.ಎಂ.ಶ್ರೀ, ಕುವೆಂಪು, ತೀ.ನಂ.ಶ್ರೀ, ಮುಂತಾದವರಿಂದ ಸಾಹಿತ್ಯ ವಿಮರ್ಶೆ ಒಂದು ಪ್ರಕಾರವಾಗಿ ಆರಂಭವಾಯಿತು. ಪಶ್ಚಿಮದ ಸಾಹಿತ್ಯ ವಿಮರ್ಶಕರ ವಿಮರ್ಶಾ ಚಿಂತನೆಗಳು ಕನ್ನಡ ವಿಮರ್ಶೆಯನ್ನು ರೂಢಿಸುತ್ತಾ ಹೋದವು. ಆದರೂ ವಿಮರ್ಶೆಯ ಈ ಬಗೆಯ ಪ್ರಭಾವಗಳ ಆಚೆ ತನ್ನದೇ ಆದ ಸ್ವಂತ ವ್ಯಕ್ತಿತ್ವವನ್ನು ಪಡೆದುಕೊಳ್ಳುತ್ತಾ ಬಂದಿದೆ. ಕೀರ್ತಿನಾಥ ಕುರ್ತಕೋಟಿ, ಜಿ.ಎಚ್.ನಾಯಕ, ಕೆ.ವಿ.ನಾರಾಯಣ, ಎಂ.ಜಿ. ಕೃಷ್ಣಮೂರ್ತಿ, ಜಿ.ಎಸ್.ಶಿವರುದ್ರಪ್ಪ, ಡಿ.ಆರ್.ನಾಗರಾಜ, ಜಿ.ಎಸ್.ಆಮೂರ, ಗಿರಡ್ಡಿ ಗೋವಿಂದರಾಜ, ಎಚ್.ಎಸ್.ರಾಘವೇಂದ್ರರಾವ್, ಮುಂತಾದವರ ಮೂಲಕ ಕನ್ನಡ ವಿಮರ್ಶೆಯು ತನ್ನ ಎತ್ತರವನ್ನು ಮುಟ್ಟಿದೆ.

೨೦ನೇ ಶತಮಾನದ ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಕನ್ನಡ ವಿಮರ್ಶೆಯು ಒಂದು ಪ್ರಮುಖ ಪ್ರಕಾರವಾಗಿದೆ. ಇಂತಹ ಸಮೃದ್ಧ ಹಿನ್ನೆಲೆ ಮತ್ತು ಪರಂಪರೆ ಇರುವ ಕನ್ನಡ ಸಾಹಿತ್ಯ ವಿಮರ್ಶೆಯು ಈಗ ತನ್ನ ಹೊಸ ತಲೆಮಾರಿನ ಮೂಲಕ ಹೊಸ ಆಯಾಮವನ್ನು ಪಡೆಯುತ್ತಿದೆ. ಹೊಸ ತಲೆಮಾರಿನ ವಿಮರ್ಶಕರಲ್ಲಿ ಪ್ರಮುಖರಾದವರೆಂದರೆ ಜೋಗಿ, ವಿಕ್ರಮ ವಿಸಾಜಿ, ಕವಿತಾ ರೈ, ತಾರಿಣಿ ಶುಭದಾಯಿನಿ ಆರ್., ಬಿ.ಎಂ.ಪುಟ್ಟಯ್ಯ, ಹರೀಶ್ ಜಿ.ಬಿ., ವೆಂಕಟಗಿರಿ ದಳವಾಯಿ, ಸಿರಾಜ್ ಅಹಮದ್ ಮುಂತಾದವರು.

ವಿಮರ್ಶಕರು, ಲೇಖಕರು ಸೃಷ್ಟಿಸಿದ ಪ್ರಪಂಚವನ್ನು ತಮ್ಮದೇ ತಾತ್ವಿಕ ನೆಲೆಯಲ್ಲಿ ಬೇರೆಯಾಗಿಯೇ ಗ್ರಹಿಸಿ ಭಿನ್ನವಾಗಿ ಹೇಳುತ್ತಾರೆ. ಕೃತಿಯ ಆಚೆಗಿನ ವಿದ್ಯಮಾನಗಳನ್ನು ಪ್ರಸ್ತುತ

ಕಾಲದ ಸಮಸ್ಯೆಗಳ ಮೇಲೂ ಬೆಳಕು ಚೆಲ್ಲುತ್ತಾರೆ. ಈ ಹಿನ್ನೆಲೆಯಲ್ಲಿ ಹೊಸ ತಲೆಮಾರಿನ ಜೀವಂತಿಕೆಯನ್ನು ಹಿಂದಿನ ತಲೆಮಾರಿನೊಂದಿಗೆ ಗ್ರಹಿಸುತ್ತಾ ಅವರ ಸಾಧನೆಗಳನ್ನು ಪರಾಮರ್ಶಿಸುವುದು ಅಗತ್ಯವಾಗಿದೆ.

ಈ ಹೊಸ ತಲೆಮಾರಿನ ವಿಮರ್ಶಕರಲ್ಲಿ ಪರಂಪರೆಯ ಜೊತೆಗೆ ಗಾಢವಾದ ಸಂಬಂಧವಿದೆ. ಅದರೊಂದಿಗೆ ಬಿಡಿಸಿಕೊಂಡು ಹೊಸತೊಂದನ್ನು ಸೃಷ್ಟಿ ಮಾಡುವ ಪ್ರತಿಭೆಯೂ ಇದೆ. ಈ ಹೊಸ ತಲೆಮಾರಿನ ವಿಮರ್ಶಕರು ತಮ್ಮ ಪ್ರಥಮ ಸಂಕಲನಗಳ ಮೂಲಕ ಪ್ರಕಟಿಸಿರುವ ಪ್ರತಿಭೆಯನ್ನು ಅಧ್ಯಯನ ಮಾಡುವುದು ಈಗ ಅಗತ್ಯವಾಗಿದೆ.

ಸಾಹಿತ್ಯದ ಸಂವಹನದಿಂದ ಹುಟ್ಟುವ ಸಾಹಿತ್ಯ ವಿಮರ್ಶೆಯು ಒಂದು ಕಡೆ ಸಾಹಿತ್ಯವನ್ನು ನಿರೂಪಿಸುತ್ತ ಮತ್ತೊಂದು ಕಡೆ ತನ್ನನ್ನೇ ತಾನು ನಿರೂಪಿಸಿಕೊಳ್ಳುತ್ತಾ ಸಾಗಿದೆ. ಕನ್ನಡ ಸಾಹಿತ್ಯ ವಿಮರ್ಶೆಯು ತಾತ್ವಿಕ ಮತ್ತು ವೈಚಾರಿಕ ಸಂಘರ್ಷದಿಂದಲೇ ಸಾಗಿಬಂದಿದ್ದು, ಈ ಸಂಘರ್ಷದ ತೀವ್ರತೆಯೇ ಸಾಹಿತ್ಯ ವಿಮರ್ಶೆಯನ್ನು ಜೀವಂತವಾಗಿಟ್ಟು, ಅದನ್ನು ಮುಂದುವರೆಸಿದೆ. ಸಮಾಜದ ವಿವಿಧ ಸ್ತರಗಳಿಂದ, ವಿವಿಧ ಧೋರಣೆಗಳಿಂದ ಬಂದವರು ಈ ಸಂಘರ್ಷದ ವಿನ್ಯಾಸವನ್ನು ವಿಸ್ತರಿಸುವುದರ ಜೊತೆಗೆ ಅದಕ್ಕೆ ಅಸಾಮಾನ್ಯ ಒಳನೋಟಗಳನ್ನು ಹಾಗೂ ವಿಭಿನ್ನ ಸಾಹಿತ್ಯಿಕ ಆಯಾಮಗಳನ್ನು ನೀಡಿದ್ದಾರೆ. "ಸಾಹಿತ್ಯಕ್ಕಾಗಿ ಸಾಹಿತ್ಯ ವಿಮರ್ಶೆ" ಎಂಬ ಧೋರಣೆ ಇಂದು ಮೂಲೆಗುಂಪಾಗಿದೆ. ಈಗ ಸಾಹಿತ್ಯ ಕೃತಿಗಳನ್ನು ಸಮಾಜದ ವಿವಿಧ ಸ್ತರಗಳಲ್ಲಿ ನಿಂತು, ವಿವಿಧ ದೃಷ್ಟಿಕೋನಗಳ ಮೂಲಕ ಸಾಹಿತ್ಯ ವಿಮರ್ಶೆ ಮಾಡಲಾಗುತ್ತಿದೆ.

ಸಾಹಿತ್ಯ ಕೃತಿಯನ್ನು ಓದುವುದು, ಅರ್ಥೈಸುವುದು, ವಿಶ್ಲೇಷಿಸುವುದು, ಮೌಲ್ಯಮಾಪನ ಮಾಡುವುದು ಸಾಹಿತ್ಯ ವಿಮರ್ಶೆಯ ಮುಖ್ಯ ಕೆಲಸವಾಗಿದೆ. ಆದರೆ ತನ್ನ ಸುತ್ತಲಿನ ಜೀವನ ಪರಿಸರದ ಜೊತೆಗೆ ಅರ್ಥಪೂರ್ಣ ಸಂಬಂಧವನ್ನು ಸ್ಥಾಪಿಸಿಕೊಂಡು ಚಿಂತನೆ ಮಾಡುವುದು ಅದರ ಇನ್ನೊಂದು ಕೆಲಸವಾಗಿದೆ. ಸಾಹಿತ್ಯ ವಿಮರ್ಶೆ ಮತ್ತು ಜೀವನ ಚಿಂತನೆ ಎರಡನ್ನು ಹೊಸ ತಲೆಮಾರಿನ ವಿಮರ್ಶಕರು ಹೇಗೆ ನಡೆಸಿದ್ದಾರೆ ಎಂಬುದು ಗಮನಿಸಬೇಕಾದುದು ಅಗತ್ಯವಾಗಿದೆ.

### ೧.೨. ಅಧ್ಯಯನದ ಉದ್ದೇಶ, ಮಹತ್ವ:

ಪ್ರಧಾನ ಧಾರೆಯಿಂದ ಹೊರಗೆ ಹಾಕಲ್ಪಟ್ಟ ಹಾಗೂ ನಿರ್ಲಕ್ಷಿತ ಸಂಗತಿಗಳು ಪ್ರಮುಖ ಅಧ್ಯಯನ ವಸ್ತುವಾಗಿ ರೂಪುಗೊಳ್ಳುತ್ತಿರುವ ಈ ಹೊತ್ತಿನಲ್ಲಿ ಪ್ರಸ್ತುತ ಸಾಹಿತ್ಯ ವಿಮರ್ಶೆಯನ್ನು ನಿರ್ಲಕ್ಷಿತ ಪ್ರಕಾರಗಳ ಅಧ್ಯಯನದ ಭಾಗವಾಗಿಯೇ ಅಧ್ಯಯನ ಮಾಡಲಾಗುತ್ತದೆ. ಸಾಹಿತ್ಯದ ಪ್ರಕಾರಗಳನ್ನು ಪಟ್ಟಿ ಮಾಡುವಾಗಲೇ ಶ್ರೇಣಿಯ ರೂಪದಲ್ಲಿ, ಕಾವ್ಯವೇ ಮೊದಲ ಸ್ಥಾನದಲ್ಲಿ

ಬಂದು ನಿಲ್ಲುತ್ತದೆ. ಅನಂತರ ಉಳಿದ ಕಥೆ, ಕಾದಂಬರಿ, ಹೀಗೆ ಪಟ್ಟಿ ಬೆಳೆಯುತ್ತಾ ವಿಮರ್ಶೆ ಹಾಗೂ ಚಿಂತನೆಗಳನ್ನು ಸೃಜನೇತರವಾದವು ಎಂದು ಕೊನೆಗೆ ಸೇರಿಸುವ ಪರಿಪಾಠವಿದೆ.

* ಆ ಕಾರಣದಿಂದ ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯನ್ನು ಅಧ್ಯಯನದ ವಸ್ತುವಾಗಿ ಆರಿಸಿಕೊಳ್ಳಲು ಸಾಹಿತ್ಯಕ ಲೋಕದಲ್ಲಿರುವ ಶ್ರೇಣೀಕರಣ ಮನೋಭಾವವೂ ಒಂದು ಕಾರಣವಾಗಿದೆ.

* ಕಥೆ, ಕಾದಂಬರಿ, ನಾಟಕ, ಕಾವ್ಯ ಮುಂತಾದ ಪ್ರಕಾರಗಳಲ್ಲಿ ಹೆಚ್ಚು ಹೆಚ್ಚು ಸಂಶೋಧನೆಗಳು ನಡೆಯುವಂತೆ ವಿಮರ್ಶೆಯಲ್ಲಿ ಏಕೆ ನಡೆಯುತ್ತಿಲ್ಲ, ವಿಮರ್ಶೆ ಎಂದರೆ ಅದು ಸಂಶೋಧನೆಯಿಂದ ಹೊರಗಿರುವ ಅಧ್ಯಯನದ ವಸ್ತುವಾಗಿದೆ. ಇತರೆ ಪ್ರಕಾರಗಳಿಗೂ ವಿಮರ್ಶೆಗೂ ಇರುವ ಅಂತರವೇನು ಎಂಬುದನ್ನು ತಿಳಿಯುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

* ಹೊಸ ತಲೆಮಾರಿನ ವಿಮರ್ಶಕರು ಹೆಚ್ಚಾಗಿ ಇಂದು ವಿಮರ್ಶೆಯಲ್ಲಿ ತೊಡಗಿಕೊಳ್ಳುತ್ತಿಲ್ಲ. ಒಂದೆರಡು ಕೃತಿಗಳು ಪ್ರಕಟಗೊಂಡ ನಂತರ ಹೆಚ್ಚಾಗಿ ವಿಮರ್ಶೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳದೆ ಹಿಂದೆ ಸರಿಯುತ್ತಿರುವುದಕ್ಕೆ ಕಾರಣವೇನು ಎಂಬುದನ್ನು ಅರಿಯುವುದರ ಅಗತ್ಯವಿದೆ.

* ಸಂಶೋಧನೆಯ ಕ್ಷೇತ್ರದಲ್ಲಿ ಇಂದು ವಿದ್ಯಾರ್ಥಿಗಳು ಕಥೆ, ಕಾದಂಬರಿ, ನಾಟಕ ಮುಂತಾದ ವಿಷಯಗಳಲ್ಲಿ ಸಂಶೋಧನೆಯನ್ನು ಮಾಡುತ್ತಿದ್ದಾರೆ. ಆದರೆ ವಿಮರ್ಶೆಯನ್ನು ಕುರಿತು ಹೆಚ್ಚಾಗಿ ಸಂಶೋಧನೆಗಳು ನಡೆಯುತ್ತಿಲ್ಲ. ಇದಕ್ಕೆ ಕಾರಣವೇನು ಎಂಬುದನ್ನು ಅರಿತು ಅಧ್ಯಯನ ಮಾಡಬೇಕಾಗಿದೆ.

* ಇತ್ತೀಚಿನ ನಮ್ಮ ಬದುಕಿನಲ್ಲಿ ಭೂಮಾಲೀಕರ ದಬ್ಬಾಳಿಕೆ, ಪುರುಷ ದೌರ್ಜನ್ಯ, ಮೂಢನಂಬಿಕೆ, ವರದಕ್ಷಿಣೆ ಸಾವು, ಕೋಮು ಗಲಭೆಗಳು ನಡೆಯುತ್ತಿವೆ. ಮೇಲಿನ ಎಲ್ಲಾ ಅಂಶಗಳನ್ನು ಸಾಹಿತ್ಯ ಕೃತಿಯ ಚರ್ಚೆಯ ಜೊತೆಯಲ್ಲಿಯೇ ಅಧ್ಯಯನ ಮಾಡುವುದು ಈಗ ಕಾಣಬರುತ್ತಿದೆ. ಈ ಹಿನ್ನೆಲೆಯಲ್ಲಿ ವಿಮರ್ಶೆ ಚಿಂತನೆಯಾಗಿ ರೂಪಾಂತರ ಪಡೆಯುತ್ತಿರುವುದನ್ನು ಗಮನಿಸುವುದು ಇಲ್ಲಿನ ಉದ್ದೇಶವಾಗಿದೆ.

* ಈಗಿನ ವಿಮರ್ಶಕರು ಅಂತಾರಾಷ್ಟ್ರೀಯ ಪ್ರಜ್ಞೆಯನ್ನು ಇಟ್ಟುಕೊಂಡು ದೇಶೀಯತೆಯ ನೆಲೆಯಲ್ಲಿ ಸಮಾಜವನ್ನು ನೋಡುತ್ತಿದ್ದಾರೆ. ಮನುಕುಲದ ಕಲ್ಯಾಣವನ್ನು ಬಯಸುವ ಆಶಯ ಹೊತ್ತು ತಮ್ಮ ಚಿಂತನೆಗಳನ್ನು ರೂಪಿಸಿದ್ದಾರೆ. ಈ ಚಿಂತನೆಗಳ ಬೆಳಕನ್ನು ಹಿಡಿದು, ರೈತನ ಆತ್ಮಹತ್ಯೆ, ಮತೀಯವಾದ, ಗುಜರಾತಿನ ಸಾವುಗಳು, ಶ್ರೀಲಂಕಾ, ಕಾಶ್ಮೀರದ ಸಮಸ್ಯೆಗಳನ್ನು ಅರಿಯಲು ಸಾಧ್ಯವೇ ಎಂದು ನೋಡುವುದರ ಅಗತ್ಯವಿದೆ. ಹೀಗೆ ಕನ್ನಡದ ವಿಮರ್ಶಾತ್ಮಕ ಚಿಂತನೆಗಳ ಮೂಲಕ ವಿಶ್ವ ಪರಿಕಲ್ಪನೆಗಳನ್ನು ಚರ್ಚಿಸುವ ಪ್ರವೃತ್ತಿ ತೋರಲಾಗುತ್ತಿದೆ. ಈ ಪ್ರವೃತ್ತಿಯನ್ನು ಪರಿಶೀಲಿಸುವ ಆಶಯ ಈ ಸಂಪ್ರಬಂಧದಲ್ಲಿದೆ.

* ಸ್ತ್ರೀವಾದದ ನೆಲೆಯಲ್ಲಿ ಹೊಸ ತಲೆಮಾರಿನ ವಿಮರ್ಶಕಿಯರ ನಿಲುವುಗಳೇನು ಎಂಬುದನ್ನು ಗುರುತಿಸುವುದು, ಪುರುಷ ಮತ್ತು ಸ್ತ್ರೀಯರ ನಡುವಿನ ದೃಷ್ಟಿಕೋನಗಳ ವ್ಯತ್ಯಾಸವನ್ನು ವಿಶ್ಲೇಷಿಸುವುದು ಹಾಗೂ ಪುರುಷ ಸಮಾಜ ನಿರೂಪಿಸಿರುವ ವ್ಯವಸ್ಥೆಯ ಕುರಿತು ಅವರಿಗಿರುವ ಬದ್ಧತೆಯನ್ನು ಅರಿಯುವುದು ಈ ಪ್ರಬಂಧದ ಉದ್ದೇಶಗಳಲ್ಲಿ ಒಂದಾಗಿದೆ.
* ಹೊಸ ತಲೆಮಾರಿನ ವಿಮರ್ಶಕರ ಬಗೆಗೆ ಇದುವರೆಗೂ ಎಂ.ಫಿಲ್, ಪಿಎಚ್.ಡಿ. ಅಧ್ಯಯಗಳು ಹೆಚ್ಚಾಗಿ ಆಗಿಲ್ಲ. ಈ ಹಿನ್ನೆಲೆಯಲ್ಲಿ ಸಂಪೂರ್ಣವಾಗಿ ಇತ್ತೀಚಿನ ವಿಮರ್ಶಕರ ತಾತ್ವಿಕ ನೆಲೆಯ ಅಧ್ಯಯನ ಕೈಗೊಳ್ಳಬೇಕೆಂಬುದು ಈ ಅಧ್ಯಯನದ ಉದ್ದೇಶವಾಗಿತ್ತು.

ಸಾಹಿತ್ಯ ವಿಮರ್ಶೆ ಹಿಂದಿಗಿಂತ ಇಂದು ಹೆಚ್ಚು ವ್ಯಾಪಕ ಆಯಾಮವನ್ನು ಪಡೆದುಕೊಳ್ಳುತ್ತಿದೆ. ಅದು ಹಿಂದೆ ಕೇವಲ ಕೆಲವೇ ಪತ್ರಿಕೆಗಳಲ್ಲಿ ಪುಟ ತುಂಬುವ, ಜನಪ್ರಿಯವಲ್ಲದ ಭಾಗವಾಗಿದ್ದುದು, ಈಗ ಬಹು ಜನರನ್ನು ಒಳಗೊಳ್ಳುವ ಆಸಕ್ತರ ಅಂಕಣವಾಗಿ ಬೆಳೆದಿದೆ. ಈ ಪಲ್ಲಟವನ್ನು ಗಮನಿಸುವುದು ಇಲ್ಲಿನ ಆಶಯವಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ:

ಯಾವುದೇ ಒಂದು ವಿಷಯದ ಅಧ್ಯಯನವು ನಿರ್ದಿಷ್ಟವಾದ ಚೌಕಟ್ಟನ್ನು ಹೊಂದಿರಬೇಕಾಗುತ್ತದೆ. ನಿರ್ದಿಷ್ಟವಾದ ವ್ಯಾಪ್ತಿಯು ವಿಷಯದ ಅಧ್ಯಯನಕ್ಕೆ ಅನುಕೂಲತೆಯನ್ನು ಮಾಡಿಕೊಡುತ್ತದೆ. ಅದರಂತೆ "ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳು" ಎಂಬ ವಿಷಯಕ್ಕೆ ನಿರ್ದಿಷ್ಟವಾದ ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಹೊಸ ತಲೆಮಾರಿನ ವಿಮರ್ಶಕರಲ್ಲಿ ಅನೇಕ ವಿಮರ್ಶಕರನ್ನು ಗುರುತಿಸಬಹುದು. ಆದರೂ ಪ್ರಸ್ತುತ ಇತರೆ ಪ್ರಕಾರಗಳಿಗೆ ಹೋಲಿಸಿದರೆ ವಿಮರ್ಶೆಯಲ್ಲಿ ತೊಡಗಿಕೊಂಡಿರುವ ವಿಮರ್ಶಕರ ಸಂಖ್ಯೆ ಗಣನೀಯವಾಗಿ ಕಡಿಮೆ ಇದೆ. ಪ್ರಸ್ತುತ ಪ್ರಬಂಧದಲ್ಲಿ ಅಧ್ಯಯನದ ದೃಷ್ಟಿಯಿಂದ ಇಬ್ಬರು ವಿಮರ್ಶಕಿಯರು ಹಾಗೂ ನಾಲ್ಕು ಜನ ವಿಮರ್ಶಕರನ್ನು ಆಯ್ದುಕೊಳ್ಳಲಾಗಿದೆ. ಜೊತೆಗೆ ಹೊಸ ತಲೆಮಾರಿನ ವಿಮರ್ಶಕರು ತಮ್ಮ ಪ್ರಥಮ ಸಂಕಲನಗಳ ಮೂಲಕ ಪ್ರಕಟಿಸಿರುವ ಪ್ರತಿಭೆಯನ್ನು ಅಧ್ಯಯನ ಮಾಡುವುದು ಇಲ್ಲಿನ ಉದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ ಮುಂದೆ ಕಾಣಿಸುವ ಆರು ವಿಮರ್ಶಕರ ಪಠ್ಯಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗುವುದು.

| ವಿಮರ್ಶಕರು | | ವಿಮರ್ಶಾ ಕೃತಿ | ಪ್ರ. ವರ್ಷ |
|---|---|---|---|
| * ವಿಕ್ರಮ ವಿಸಾಜಿ | – | 'ಬೆಳಗಿನ ಮುಖ' | ೨೦೦೪ |
| * ಜೋಗಿ | – | 'ಜಾನಕಿ ಕಾಲಂ' | ೨೦೦೬ |
| * ತಾರಿಣಿ ಶುಭದಾಯಿನಿ ಆರ್. | – | 'ಹೆಡೆಯಂತಾಡುವ ಸೊಡರು' | ೨೦೦೭ |

* ಬಿ.ಎಂ.ಪುಟ್ಟಯ್ಯ – 'ಕದಡು' ೨೦೦೮
* ಕವಿತಾ ರೈ – 'ಅರಿವಿನ ನಡೆ' ೨೦೦೭
* ಹರೀಶ್ ಜಿ.ಬಿ. – 'ಬೆಳಕಿನಾಟ' ೨೦೦೫

ಈ ಮೇಲ್ಕಂಡ ಆಯ್ದ ವಿಮರ್ಶಕರು ತಮ್ಮದೇ ತಾತ್ವಿಕ ಹಾಗೂ ಸಾಹಿತ್ಯಕ ನೆಲೆಗಳ ಮೂಲಕ ವಿಶಿಷ್ಟರಾಗಿ ಹೊಮ್ಮಿದ್ದಾರೆ. ವಿಕ್ರಮ ವಿಸಾಜಿಯವರು ಪ್ರಾದೇಶಿಕ ನೆಲೆಯಲ್ಲಿ ಚಿಂತನೆ ಮಾಡುವ ವಿಮರ್ಶಕರಾಗಿ ಕಂಡರೆ, ಜೋಗಿಯವರು ಕಥೆಗಾರ ಮತ್ತು ಪತ್ರಕರ್ತರಾಗಿದ್ದು, ಸಾಹಿತ್ಯವನ್ನು ಶಾಸ್ತ್ರೀಯವಾಗಿ ನೋಡದೆ ತಮ್ಮದೇ ಆದ ಸೃಜನಶೀಲ ಹಾಗೂ ಕಥನಾತ್ಮಕ ಅಭಿವ್ಯಕ್ತಿಯಲ್ಲಿ ತೊಡಗಿಕೊಂಡಿದ್ದಾರೆ. ಬಿ.ಎಂ.ಪುಟ್ಟಯ್ಯ ದಲಿತ ಲೇಖಕರಾಗಿ, ದಲಿತರ ಬದುಕಿಗೆ ಅವರ ನೋವುಗಳಿಗೆ ಧ್ವನಿಯಾಗಿದ್ದಾರೆ. ಎಡಪಂಥೀಯ ನೆಲೆಯಲ್ಲಿ ಇವರ ಚಿಂತನೆಗಳನ್ನು ಗುರುತಿಸಬಹುದಾಗಿದೆ. ಹರೀಶ್ ಜಿ.ಬಿ.ಯವರು ಕೊಂಚ ಬಲಪಂಥೀಯ ಧೋರಣೆ ಉಳ್ಳವರಾಗಿದ್ದಾರೆ. ವಿಮರ್ಶಕಿಯರಾದ ತಾರಿಣಿ ಶುಭದಾಯಿನಿ ಆರ್., ಕವಿತಾ ರೈ ಅವರು ಹೊಸ ಭರವಸೆಯನ್ನು ಮೂಡಿಸಿದ ವಿಮರ್ಶಾ ಲೋಕದ ಸ್ತ್ರೀ ದನಿಯ ಲೇಖಕರಾಗಿದ್ದಾರೆ.

"ಕಾವ್ಯ ನನ್ನ ಅಭಿವ್ಯಕ್ತಿಯ ರೂಪವಾದರೆ, ವಿಮರ್ಶೆ ಅದನ್ನು ಇನ್ನಷ್ಟು ಅರಿಯುವ ಪ್ರಯತ್ನ" ಎಂದು ಭಾವಿಸುವ ತಾರಿಣಿ, ಕೃತಿ ವಿಮರ್ಶೆ, ಸೈದ್ಧಾಂತಿಕ ವಿಮರ್ಶೆ, ಸಂಸ್ಕೃತಿ ವಿಮರ್ಶೆ, ಹೀಗೆ ಹಲವು ಕವಲುಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಕವಿ, ವಿಮರ್ಶಕಿ, ಕಥೆಗಾರ್ತಿಯಾಗಿ ದಶಕದಿಂದೀಚೆಗೆ ಗಮನ ಸೆಳೆಯುವ ಕವಿತಾ ರೈ ಅವರ ಕಾವ್ಯದಲ್ಲಿ ಕಾಣುವ ಬದುಕಿನ ವಿಶ್ಲೇಷಣೆ, ಕವಿತಾರವರ ವಿಮರ್ಶೆಯ ಬರಹಗಳಲ್ಲೂ ಇದೆ. ಅವರ "ಅರಿವಿನ ನಡೆ" ವಿಮರ್ಶಾ ಕೃತಿಯಲ್ಲಿ ಜಾಗತೀಕರಣದಿಂದ ಸಾಂಸ್ಕೃತಿಕ ನಡಾವಳಿಗಳ ವಿಶ್ಲೇಷಣೆ ಇದೆ.

ಹೀಗೆ ಪ್ರತಿಯೊಬ್ಬ ವಿಮರ್ಶಕರು ಭಿನ್ನ ಭಿನ್ನ ನೆಲೆಗಳಲ್ಲಿ ಸಾಹಿತ್ಯ ವಿಮರ್ಶೆಯನ್ನು ಮಾಡಿರುವುದನ್ನು ಕಾಣಬಹುದು. ಇವರ ಜೀವನ ದೃಷ್ಟಿ ಸಾಹಿತ್ಯದ ಕುರಿತ ವಿಭಿನ್ನ ಆಲೋಚನೆ ಚರ್ಚಿಸುವುದು, ಹಿರಿಯ ತಲೆಮಾರಿನವರ ಕುರಿತು ಹೊಸ ತಲೆಮಾರಿನ ವಿಮರ್ಶಕರಿಗಿರುವ ಅಭಿಪ್ರಾಯಗಳು ಹಾಗೂ ಹೊಸ ತಲೆಮಾರಿನ ವಿಮರ್ಶಕರ ಅಭಿವ್ಯಕ್ತಿಯ ಕ್ರಮವನ್ನು ಚರ್ಚಿಸುವುದು ಈ ಸಂಪ್ರಬಂಧದ ವ್ಯಾಪ್ತಿಯಾಗಿದೆ.

### ೧.೪. ಅಧ್ಯಯನದ ವಿಧಾನ:

ಸಾಹಿತ್ಯ ವಿಮರ್ಶೆ ಬಹುಮುಖ ಆಯಾಮವನ್ನು ಹೊಂದಿರುವ ಪ್ರಕಾರ, ಈ ಪ್ರಕಾರ ಏಕಮುಖ ಸ್ವರೂಪದಲ್ಲಿ ಅಭಿವ್ಯಕ್ತಗೊಳ್ಳುವುದಿಲ್ಲ. ವಿಭಿನ್ನ ಆಯಾಮಗಳು ಸಾಹಿತ್ಯ ವಿಮರ್ಶೆಯ ರೂಪುಗೊಳ್ಳುವಿಕೆಗೆ ಕಾರಣವಾಗಿವೆ.

* ಆಶಯದ ನೆಲೆಯಲ್ಲಿ ಎಲ್ಲಾ ವಿಮರ್ಶಕರನ್ನು ಒಟ್ಟಾಗಿ ನೋಡಲು ಮತ್ತು ಪ್ರತಿಯೊಬ್ಬ ವಿಮರ್ಶಕರ ನಡುವೆ ಇರುವ ವೈಶಿಷ್ಟ್ಯಗಳೇನು ಎಂದು ತೌಲನಿಕವಾಗಿ ಕೊನೆಯಲ್ಲಿ ನೋಡಲು ಯತ್ನಿಸಲಾಗಿದೆ.

* ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಸಾಹಿತ್ಯಿಕವಾಗಿ ಹೀಗೆ ಬಹುಶಿಸ್ತೀಯ ನೆಲೆಯಲ್ಲಿ ಹೊಸ ತಲೆಮಾರಿನ ವಿಮರ್ಶಕರ ಪ್ರಥಮ ವಿಮರ್ಶಾ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

* ಸಾಹಿತ್ಯ ವಿಮರ್ಶೆ ವಿಸ್ತೃತ ಆಯಾಮವನ್ನು ಹೊಂದಿರುವುದರಿಂದ ಪೂರ್ಣ ಪ್ರಮಾಣದ ಅಧ್ಯಯನ ಸಾಧ್ಯವಾಗಿಲ್ಲ. ಹಳೆಯ ಮತ್ತು ಹೊಸ ತಲೆಮಾರಿನ ವಿಮರ್ಶಕರನ್ನು ಪರಂಪರೆಯ ಅನುಸಂಧಾನದ ನೆಲೆಯಲ್ಲಿ ನೋಡಲಾಗಿದೆ. ಸಾಹಿತ್ಯಕ, ಸಾಮಾಜಿಕ, ವಿಮರ್ಶಕರ ಅಭಿವ್ಯಕ್ತಿಯ ನೆಲೆಯಲ್ಲಿ ಮಾತ್ರ ಅಧ್ಯಯನ ಮಾಡಲಾಗಿದೆ.

* ಸಂಖ್ಯಾ ದೃಷ್ಟಿಯಿಂದ ಹೊಸ ತಲೆಮಾರಿನ ವಿಮರ್ಶಕರ ಕೃತಿಗಳು ಹೆಚ್ಚಿವೆ. ಅವುಗಳಲ್ಲಿ ಹಲವಾರು ಲೇಖನಗಳಿವೆ. ಈ ಹಿನ್ನೆಲೆಯಲ್ಲಿ ಈ ವಿಮರ್ಶಕರ ಪ್ರಥಮ ಕೃತಿಗಳನ್ನು ಹಾಗೂ ಈ ಕೃತಿಯ ಒಳಗಿರುವ ಪ್ರಾತಿನಿಧಿಕ ಲೇಖನಗಳನ್ನು ಮಾತ್ರ ಅಧ್ಯಯನದ ದೃಷ್ಟಿಯಿಂದ ವಿಶ್ಲೇಷಣೆ ಮಾಡಲಾಗಿದೆ. ಆದುದರಿಂದ ಇಲ್ಲಿ ಪ್ರಾತಿನಿಧಿಕತೆಯೇ ಸಾಹಿತ್ಯ ವಿಮರ್ಶೆಯ ಸ್ವರೂಪದ ಅಳತೆಗೋಲಾಗಿದೆ.

* ಆಯಾ ವಿಮರ್ಶಕರ ವಿಮರ್ಶೆಯ ಭಾಷೆ, ಶೈಲಿ ಹಾಗೂ ಅವರ ಅಭಿವ್ಯಕ್ತಿಯ ನೆಲೆಗಳನ್ನು ಅರ್ಥೈಸಲು ಪ್ರಯತ್ನಿಸಲಾಗಿದೆ.

* ಮಹಿಳಾವಾದದ ನೆಲೆಯಲ್ಲಿ ವಿಮರ್ಶಕಿಯರಾದ ತಾರಿಣಿ ಶುಭದಾಯಿನಿ ಮತ್ತು ಕವಿತಾ ರೈರವರ ನಿಲುವುಗಳೇನು? ಸ್ತ್ರೀಪರವಾದ ಅವರ ಬರಹಗಳ ತಾತ್ವಿಕ ಮುಖಗಳೇನು? ಪುರುಷ ಮತ್ತು ಸ್ತ್ರೀ ವಿಮರ್ಶಕರ ನಡುವಿನ ಅವರ ದೃಷ್ಟಿಕೋನಗಳೇನು? ಎಂಬುದರ ಕುರಿತು ಚರ್ಚಿಸಲಾಗಿದೆ.

* ಹೊಸ ತಲೆಮಾರಿನ ವಿಮರ್ಶಕರಾದ ವಿಕ್ರಮ ವಿಸಾಜಿ, ಬಿ.ಎಂ.ಪುಟ್ಟಯ್ಯ, ಜೋಗಿ, ತಾರಿಣಿ ಶುಭದಾಯಿನಿ, ಹರೀಶ ಜಿ.ಬಿ. ಹಾಗೂ ಕವಿತಾ ರೈ ಅವರು ವಿಮರ್ಶಿಸಿದ ಕೃತಿಯನ್ನೇ, ಬೇರೆ ಯಾರಾದರೂ ವಿಮರ್ಶಿಸಿದ್ದರೆ ಅಂತಹ ಲೇಖನಗಳೊಂದಿಗೆ ತೌಲನಿಕ ಅಧ್ಯಯನ ನಡೆಸಲು ಯತ್ನಿಸಲಾಗುವುದು.

### ೧.೫. ಈವರೆಗಿನ ಅಧ್ಯಯನಗಳ ಸಮೀಕ್ಷೆ–ವಿಮರ್ಶೆ

'ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳು' ಎಂಬ ವಿಷಯದ

ಅಡಿಯಲ್ಲಿ, ಇತ್ತೀಚಿನ ಕೆಲವು ವಿಮರ್ಶಕರ ವಿಮರ್ಶಾ ಕೃತಿಗಳ ಕುರಿತು ಸಮೀಕ್ಷೆ ಮಾಡುವುದರಿಂದ ಪ್ರಸ್ತುತ ಅಧ್ಯಯನಕ್ಕೆ ಒಂದು ಹಿನ್ನೆಲೆ ಸಿಗುತ್ತದೆ. ಇದಕ್ಕಾಗಿ ಹೊಸ ತಲೆಮಾರಿನ ಪ್ರಮುಖ ವಿಮರ್ಶಕರಾದ ವಿಕ್ರಮ ವಿಸಾಜಿ, ಬಿ.ಎಂ.ಪುಟ್ಟಯ್ಯ, ಜೋಗಿ, ತಾರಿಣಿ ಶುಭದಾಯಿನಿ, ಜಿ.ಬಿ.ಹರೀಶ, ಕವಿತಾ ರೈ. ಅವರ ಪ್ರಥಮ ವಿಮರ್ಶಾ ಕೃತಿಗಳ ಕುರಿತು ಬಂದಿರುವ ವಿಮರ್ಶೆ ಮತ್ತು ಮುನ್ನುಡಿಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ವಿಮರ್ಶಾ ಕೃತಿಗಳು ಇತ್ತೀಚೆಗೆ ಪ್ರಕಟಗೊಂಡಿರುವುದರಿಂದಲೂ, ವಿಮರ್ಶೆಯಲ್ಲಿ ಹೆಚ್ಚಾಗಿ ವಿಮರ್ಶಕರು ತೊಡಗಿಸಿಕೊಳ್ಳದೇ ಇರುವುದರಿಂದಲೂ, ಇವುಗಳ ಮೇಲೆ ಅಷ್ಟಾಗಿ ವಿಮರ್ಶೆ ಬಂದಿಲ್ಲ. ಆದರೂ ಈ ದಿಸೆಯಲ್ಲೆ ಬಂದಿರುವ ಕೆಲವೇ ಲೇಖನ ಮತ್ತು ಒಟ್ಟಾರೆ ಅವರ ವಿಮರ್ಶಾ ಬರವಣಿಗೆಯ ಕುರಿತು ವಿಮರ್ಶೆ ಬಂದಿರುವುದನ್ನು ಇಟ್ಟುಕೊಂಡು ಇಲ್ಲಿ ಚರ್ಚೆ ಮಾಡಲಾಗಿದೆ.

ತಾರಿಣಿಯವರ 'ಶ್ರೇಷ್ಠತೆಯ ಸವಾರಿ' ಲೇಖನದ ಮೇಲೆ ಸಂವಾದ ಪತ್ರಿಕೆಯಲ್ಲಿ ಬಂದ ಮೂರು ಪ್ರತಿಕ್ರಿಯೆಗಳನ್ನು ಮೊದಲಿಗೆ ನೋಡಬಹುದು. ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಶಿಷ್ಟ, ಜಾನಪದ ನಂಬಿಕೆಗಳೆಂದು ಬೇರ್ಪಡಿಸುವುದು ತುಂಬಾ ಕಷ್ಟ. ಪ್ರಗತಿ ಅಥವಾ ಶ್ರೇಷ್ಠತೆ ಎನ್ನುವ ಕಲ್ಪನೆ ಒಂದು ರಾಷ್ಟ್ರದ, ನಾಡಿನ ಜೀವನದಲ್ಲಿ ಒಂದೇ ಹಂತದಲ್ಲಿ ಕಂಡುಬಂದ ಉದಾಹರಣೆಗಳು ವಿರಳವೆಂದು ಭಾರತದ, ಕನ್ನಡ ನಾಡಿನ ಚರಿತ್ರೆ ತೋರಿಸುತ್ತದೆ. ಈ ರೀತಿಯಾಗಿ ಲೇಖನವನ್ನು ಪರಾಮರ್ಶಿಸುವ ಇತಿಹಾಸಕಾರರಾದ ಡಾ. ಜೋತ್ಸ್ನಾ ಕಾಮತ್‌ರವರು ಕೊನೆಗೆ ಶ್ರೇಷ್ಠತೆಯ ಕಲ್ಪನೆ ಬೇರೆ ಬೇರೆ ನೆಲೆಗಳಲ್ಲಿ ಅಭಿವ್ಯಕ್ತಗೊಳ್ಳುತ್ತದೆ ಎನ್ನುತ್ತಾರೆ. ನಮ್ಮ ಸಾಂಸ್ಕೃತಿಕ ಧಾರ್ಮಿಕ ಪುರುಷರು, ಸುಧಾರಣೆಯ ಹೆಸರನಲ್ಲಿ, ಮೂಢನಂಬಿಕೆಗಳ ನಿವಾರಣೆ ಪ್ರಕ್ರಿಯೆಯಲ್ಲಿ, ಆದರೆ ನಮ್ಮ ಜನಪದರ ನೈಜ ಸಂಸ್ಕೃತಿಯನ್ನು ನಾಶಪಡಿಸುವಲ್ಲಿ ವಹಿಸಿರುವ ಪಾತ್ರವನ್ನು ತಾರಿಣಿ ಗುರುತಿಸಿದ್ದಾರೆ. ಬಿ. ರಾಜಣ್ಣನವರು ತಮ್ಮ ಪ್ರತಿಕ್ರಿಯೆಯಲ್ಲಿ ಈ ಅಂಶಗಳನ್ನೇ ಮುಖ್ಯವಾಗಿಟ್ಟುಕೊಂಡು ಚರ್ಚೆ ಮಾಡುತ್ತಾರೆ. ತಾರಿಣಿಯವರು ಪ್ರಸ್ತಾಪ ಮಾಡಿರುವ ಅಂಶಗಳನ್ನೇ ಇವರು ಮತ್ತೊಮ್ಮೆ ಚರ್ಚಿಸಿದ್ದಾರೆ. ಇದು ಸಾಹಿತ್ಯಕವಾಗಿ ಶ್ರೇಷ್ಠತೆಯ ಪರಿಕಲ್ಪನೆಯನ್ನು ಹಿಂದಿನ ಕಾಲದಿಂದಲೂ ಮೂಡಿಬಂದಿರುವುದನ್ನು ಚರ್ಚೆಗೆ ತೆಗೆದುಕೊಳ್ಳುವುದಿಲ್ಲ. ಆದರೆ ಲೇಖನದಲ್ಲಿನ ಅಂಶಗಳೊಂದಿಗೆ ಭಿನ್ನ ನೆಲೆಗಳಲ್ಲಿ ಚರ್ಚಿಸುವುದಿಲ್ಲ.

ಜಿ.ಬಿ.ಹರೀಶರವರ 'ಬೆಳಕಿನಾಟ' ಕೃತಿಗೆ ಮುನ್ನುಡಿ ಬರೆದಿರುವ ಪ್ರೊ.ಕೆ.ಜಿ.ನಾಗರಾಜಪ್ಪರವರು ಸಂಕಲನದ ಎಲ್ಲಾ ಲೇಖನಗಳನ್ನು ಮುಖ್ಯವಾಗಿಟ್ಟುಕೊಂಡು ಚರ್ಚಿಸಿದ್ದಾರೆ. ಇಲ್ಲಿ ಸಾಂದರ್ಭಿಕವಾಗಿ ಬರೆದಿರುವ ಲೇಖನಗಳ ಮೂಲಧ್ವನಿಯ ಪತ್ತೆಗೆ ಪ್ರಯತ್ನಿಸಿದೆ. ಯಾವುದೇ ಸಂಸ್ಕೃತಿಯಿಂದ ಮಾಡಿರುವ ಸಾಹಿತ್ಯವನ್ನು ಅದೇ ಸಂಸ್ಕೃತಿಯಿಂದಲೇ ಬೆಲೆಗಟ್ಟಬೇಕೆಂಬುದೇ ಈ ಕೃತಿಯ ನಿಲುವು, ಲೇಖಕರು ಕೃತಿನಿಷ್ಠ ನವ್ಯ ವಿಮರ್ಶೆಯ ವಿರುದ್ದವಾಗಿದ್ದರೂ, ಆಧುನಿಕ ವಿಮರ್ಶೆಯ

ಚಳುವಳಿಗಳನ್ನು ಮತ್ತು ಸಾಹಿತ್ಯ ಸಮಸ್ಯೆಗಳ ಕುರಿತು ಚರ್ಚಿಸಿದ್ದಾರೆ ಎಂದು ಪ್ರೊ. ಕೆ.ಜಿ.ನಾಗರಾಜಪ್ಪ ಹೇಳುತ್ತಾರೆ. 'ಲಂಕೇಶ್ ಪತ್ರಿಕೆ'ಯಲ್ಲಿ ವಿಕ್ರಮ ವಿಸಾಜಿ ಮತ್ತು ತಾರಿಣಿಯವರ ಕುರಿತು ರಹಮತ್ ತರೀಕೆರೆಯವರ ಕಿರುಲೇಖನಗಳು ಪ್ರಕಟವಾಗಿವೆ. ಆ ಲೇಖನಗಳಲ್ಲಿ ಚರ್ಚಿತವಾಗಿರುವ ಅಂಶಗಳನ್ನು ವಿಸ್ತೃತ ನೆಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಇದರ ಜೊತೆಗೆ ಹೊಸತಲೆಮಾರಿನ ಬರಹಗಾರರ ಮೇಲೆ ಬಂದಿರುವ 'ತಲೆಮಾರಿನ ತಳಮಳ', 'ಹೊಸ ತಲೆಮಾರಿನ ತಲ್ಲಣ', 'ಶತಮಾನದ ಸಾಹಿತ್ಯ ವಿಮರ್ಶೆ', 'ಸಮಾಲೋಚನ' ಮುಂತಾದ ಕೃತಿಗಳನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನದಲ್ಲಿ ವಿಸ್ತರಿಸಿಕೊಳ್ಳಲಾಗಿದೆ.

# ಅಧ್ಯಾಯ – ೨
# ಹೊಸ ತಲೆಮಾರಿನ ವಿಮರ್ಶಕರ ಹಿನ್ನೆಲೆ

## ೨.೧. ವಿಕ್ರಮ ವಿಸಾಜಿ

ವಿಕ್ರಮ ವಿಸಾಜಿಯವರು ಡಿಸೆಂಬರ್ ೧, ೧೯೭೬ ಬೀದರ ಜಿಲ್ಲೆಯ ಭಾಲ್ಕಿಯಲ್ಲಿ ಜನಿಸಿದರು. ಶ್ರೀಯುತರು ಹಿರಿಯ ಲೇಖಕ ಜಿ.ಬಿ. ವಿಸಾಜಿಯವರ ಮಗ. ವಿಕ್ರಮ ವಿಸಾಜಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಅವರ ಪ್ರಕಟಿತ ಕೃತಿಗಳೆಂದರೆ 'ಗಾಳಿಪಟ', 'ನನ್ನ ಸುತ್ತಲಿನ ಜನರು', 'ನಿವೇಕೆ ಕತ್ತಲೆ ಕಡೆ', 'ತಮಾಷಾ' ಕವನ ಸಂಕಲನಗಳು. 'ಇಥಾಕಾ' ಆಧುನಿಕ ಗ್ರೀಕ್ ಕವಿತೆಗಳ ಅನುವಾದವಾಗಿದ್ದರೆ (ಡಾ.ವಿಜಯಾ ಗುತ್ತಲ ಅವರೊಂದಿಗೆ) 'ಕಂಬಾರರ ನಾಟಕಗಳು' ವಿಮರ್ಶೆಗಳ ಸಂಪಾದನೆಯಾಗಿದೆ. ಶ್ರೀಯುತರು ಎರಡು ಬಾರಿ (೧೯೯೫–೨೦೦೧) ಗುಲಬರ್ಗಾ ವಿಶ್ವವಿದ್ಯಾಲಯದಿಂದ ಪುಸ್ತಕ ಪ್ರಶಸ್ತಿಯನ್ನು ಪಡೆದಿದ್ದಾರೆ. ನಂದಿಹಳ್ಳಿ ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡ ಅಧ್ಯಾಪಕರಾಗಿ ಕಾರ್ಯನಿರ್ವಹಿಸಿದ ಅವರು ಸದ್ಯ ಗುಲಬರ್ಗಾ ಕೇಂದ್ರೀಯ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಸ್ವತಃ ಲೇಖಕರೂ ಆದ ವಿಕ್ರಮ ವಿಸಾಜಿಯವರು ತಮ್ಮ ಭಾಷಣ ಮತ್ತು ಬರಹಗಳಿಂದ ಭಾಲ್ಕಿಯಂತಹ ಪ್ರದೇಶದಲ್ಲಿ ಸಾಹಿತ್ಯಕ ಪರಿಸರ ನಿರ್ಮಿಸಿದವರು. ಶ್ರೀಯುತರು ಮುಖ್ಯವಾಗಿ ಕಾವ್ಯ, ವಿಮರ್ಶೆ ಮತ್ತು ಅನುವಾದ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಈಚೆಗೆ ಹೊರಬಂದಿರುವ 'ಗೂಡು ಕಟ್ಟುವ ಚಿತ್ರ' (೨೦೦೬) ಸಂಕಲನವು ಅವರ ಕಾವ್ಯ ಪಡೆದಿರುವ ಹೊಸ ಆಯಾಮವನ್ನು ಸೂಚಿಸುತ್ತದೆ. ವಿಸಾಜಿಯವರು ಬಾಲ್ಯದಲ್ಲೇ ತಮ್ಮನ್ನು ಅತಿಯಾಗಿ ಆವರಿಸಿಕೊಂಡಿದ್ದ ಕಂಬಾರರ ಕಾವ್ಯದ ಮೇಲೆ ಮುಂದೆ ಸಂಶೋಧನೆ ಮಾಡಿದರು. 'ನಾದಗಳು ನುಡಿಯಾಗಲೆ' (೨೦೦೮) ಎಂಬ ಹೆಸರಲ್ಲಿ ಇದು ಪ್ರಕಟವಾಗಿದೆ.

'ಬೆಳಕಿನ ಮುಖ' ವಿಕ್ರಮ ವಿಸಾಜಿಯವರ ವಿಮರ್ಶಾ ಕೃತಿಯಾಗಿದ್ದು, ಇದರಲ್ಲಿನ ಪ್ರಮುಖ ವಿಮರ್ಶಾ ಲೇಖನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿಕೊಂಡಿದೆ. 'ಬರಹ: ತಾತ್ವಿಕತೆ ಮತ್ತು ಯುವಪೀಳಿಗೆ', 'ಹೈದ್ರಾಬಾದ್ ಕರ್ನಾಟಕದ ಹೊಸಗನ್ನಡ ಕಾವ್ಯ', 'ಶಿವಾಪುರದ ಹೆಬ್ಬಾಗಿಲ ಬಳಿನಿಂತು : ಕಂಬಾರರ ನಾಟಕಗಳ ವಿವೇಚನೆ, 'ಗಿರೀಶ್ ಕಾರ್ನಾಡ್ : ಚರಿತ್ರೆ

ಜೊತೆಗಿನ ಜಗಳ ಮತ್ತು ಗೆಳೆತನ', 'ಕೀರ್ತಿನಾಥ ಕುರ್ತಕೋಟಿ : ಶಬ್ದಸಂದಣಿಯಲ್ಲಿ ಬೆಳಕಿನ ಹುಡುಕಾಟ, 'ಆಧುನಿಕ ಗ್ರೀಕ್ ಕಾವ್ಯ : ಮರೆತು ಹೋದ ಸೂರ್ಯನ ಅವಶೇಷಗಳು', 'ಜಾತ್ರೆಯಲ್ಲಿನ ಶಿವ : ಮುಗ್ಧತೆಯನ್ನು ಹಂಬಲಿಸಿ', 'ಬೀದರ ಜಿಲ್ಲೆಯ ಕಾದಂಬರಿಗಳು', 'ನಮಗಿದೊಂದು ಸವಾಲಿನ ಕಾಲ'– ಇವು ಇಲ್ಲಿರುವ ಮುಖ್ಯ ಲೇಖನಗಳಾಗಿವೆ.

**೨.೨. ಬಿ.ಎಂ.ಪುಟ್ಟಯ್ಯ**

ಬಿ.ಎಂ.ಪುಟ್ಟಯ್ಯ (೧೧.೦೬.೧೯೬೭) ಚಿಕ್ಕಮಗಳೂರು ಜಿಲ್ಲೆಯ ಬಾಸಾಪುರ ಎಂಬ ಹಳ್ಳಿಯ ಅನಕ್ಷರಸ್ಥ ಕುಟುಂಬದಲ್ಲಿ ಹುಟ್ಟಿದರು. ಮೂರನೇ ತರಗತಿಯವರೆಗೆ ಅದೇ ಊರಿನಲ್ಲಿ ಓದಿದರು. ನಾಲ್ಕನೇ ತರಗತಿಯಿಂದ ಏಳನೇ ತರಗತಿಯವರೆಗೆ ಸಂಗಮೇಶ್ವರ ಪೇಟೆಯಲ್ಲಿಯೂ ಹೈಸ್ಕೂಲನ್ನು ಆಣಲೂರಿನಲ್ಲಿಯೂ ಪಿ.ಯು.ಸಿ. ಮತ್ತು ಬಿ.ಎ.ಯನ್ನು ಚಿಕ್ಕಮಗಳೂರಿನಲ್ಲಿಯೂ ಮುಗಿಸಿ, ಎಂ.ಎ. ಪದವಿಯನ್ನು ಕುವೆಂಪು ವಿಶ್ವವಿದ್ಯಾಲಯದಲ್ಲಿ (೧೯೯೨)ರಲ್ಲಿ ಪ್ರಥಮ ರ್‍ಯಾಂಕಿನೊಂದಿಗೆ ಪಡೆದರು.

೧೯೯೨ರಲ್ಲಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಶ್ರೀಕಂಠ ಕೂಡಿಗೆ ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಮಾಡಿದರು. ೧೯೯೩ರಿಂದ ೧೯೯೪ರವರೆಗೆ ಕುದುರೆಮುಖ ಜೂನಿಯರ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸಿದ ಅವರು ೧೯೯೪ರಿಂದ ಕನ್ನಡ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದಾರೆ. ಈಗ ಸಹ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. 'ದೇವನೂರ ಮಹಾದೇವ', 'ಅಲಕ್ಷಿತ ವಚನಕಾರರ ಲೋಕದೃಷ್ಟಿ', 'ಸಾವು : ಒಂದು ಚಿಂತನೆ', 'ಆತ್ಮಕಥೆಗಳಲ್ಲಿ ಕರ್ನಾಟಕದ ಕತೆ', 'ಕಾಲ್ನಡಿಗೆ', 'ಒಂದನೇ ತರಗತಿಯಿಂದಲೇ ಉರುಳು', 'ವಡ್ಡಾರಾಧನೆ : ಸಾಂಸ್ಕೃತಿಕ ಮುಖಾಮುಖಿ (ಸಂ)', 'ಆದಿಪುರಾಣ ಸಾಂಸ್ಕೃತಿಕ ಮುಖಾಮುಖಿ (ಸಂ)', 'ಧರ್ಮಾಮೃತ ಸಾಂಸ್ಕೃತಿಕ ಮುಖಾಮುಖಿ' (ಸಂ.), 'ಹರಿಶ್ಚಂದ್ರ ಚಾರಿತ್ರ : ಸತ್ಯದ ತೊಡಕು', 'ಕದಡು', 'ಬಾಬಾಬುಡನ್ ಗಿರಿ : ಮುಚ್ಚಿಟ್ಟ ಮುಖಗಳು', 'ಇದು ಬರೀ ನಿದ್ದೆಯಲ್ಲವೋ ಅಣ್ಣಾ' ಇವು ಇವರ ಪ್ರಕಟಿತ ಕೃತಿಗಳಾಗಿವೆ.

'ಕದಡು' ಬಿ.ಎಂ.ಪುಟ್ಟಯ್ಯನವರ ವಿಮರ್ಶಾ ಕೃತಿಯಾಗಿದೆ. ಈ ವಿಮರ್ಶಾ ಕೃತಿಯಲ್ಲಿರುವ ಈ ಮುಂದೆ ಕಾಣಿಸಿರುವ ವಿಮರ್ಶಾ ಲೇಖನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. 'ಹರಿಶ್ಚಂದ್ರ ಚಾರಿತ್ರ : ಸತ್ಯದ ನಿರೂಪಣೆ ಮತ್ತು ನಿಲುವಿನ ಸಮಸ್ಯೆ', 'ದಲಿತ ಸಾಹಿತ್ಯಕ್ಕೆ ಸಾಹಿತ್ಯ ಮೀಮಾಂಸೆ ಎಂಬುದು ಬೇಕೆ?', 'ಕನ್ನಡ ಸಾಹಿತ್ಯ : ವರ್ಣ ಮತ್ತು ಜಾತಿ ಪರಿಕಲ್ಪನೆಗಳು', 'ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮಾನವಪರ ಧೋರಣೆಗಳು', 'ನೇಮಿಚಂದ್ರ ಮತ್ತು ನಯಸೇನ', 'ಕಾರಂತರ ಆತ್ಮ : ಚರಿತ್ರೆಗಳು ಕಾದಂಬರಿಗಳ ಒಳಗೆ ಮತ್ತು ಹೊರಗೆ',

'ಕುವೆಂಪು ಕೃತಿಗಳಲ್ಲಿ ಆಳು ಬದುಕಿನ ವಿನ್ಯಾಸಗಳು' ಹಾಗೂ 'ಸಾಹಿತ್ಯ ಮತ್ತು ದಲಿತ ಚಳುವಳಿ'.

### ೨.೩. ಜೋಗಿ:

'ಜೋಗಿ' ಎಂದೇ ಕನ್ನಡ ಸಾಹಿತ್ಯ ಲೋಕದಲ್ಲಿ ಹೆಸರಾಗಿರುವ ಗಿರೀಶ್‌ರಾವ್ ತಮ್ಮ ಕಥೆ ತಮ್ಮ ಕಾದಂಬರಿಗಳ ಮೂಲಕ ಹೊಸ ತಲೆಮಾರಿನ ಪ್ರಮುಖ ಬರಹಗಾರರೆನಿಸಿದ್ದಾರೆ. ತಮ್ಮದೇ ವಿಶಿಷ್ಟ ಕಥನದ ಮೂಲಕ ಇವರು ಕನ್ನಡದ ಸಮಕಾಲೀನ ಬರಹಗಾರರಿಗಿಂತ ಭಿನ್ನರಾಗಿದ್ದಾರೆ. ಜೋಗಿಯವರ ಕಥನದ ಶೈಲಿಯು ಭಿನ್ನವಾಗಿದೆ. ಸುದೀರ್ಘಕಾಲ ಪತ್ರಿಕಾ ಕ್ಷೇತ್ರದಲ್ಲಿನ ತೊಡಗಿಸಿಕೊಳ್ಳುವಿಕೆ ಅವರ ಕಥೆ, ಕಾದಂಬರಿಗಳಲ್ಲೂ ಪ್ರತಿಫಲಿತಗೊಂಡಿದೆ.

ಜೋಗಿಯವರು ಮೂಲತಃ ದಕ್ಷಿಣ ಕನ್ನಡದ ಗುರುವಾಯನ ಕೆರೆಯುವರು. ಪ್ರಸ್ತುತ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಸದ್ಯ 'ಕನ್ನಡ ಪ್ರಭ' ದೈನಿಕದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಕಥೆ, ಕಾದಂಬರಿ, ವಿಮರ್ಶೆ ಅವರ ಪ್ರಕಾರಗಳು. ಸಿನಿಮಾಕ್ಕೆ ಚಿತ್ರಕತೆ, ಸಂಭಾಷಣೆಗಳನ್ನು ಸಹ ಬರೆದಿದ್ದಾರೆ. ಅಲ್ಲದೇ ಧಾರಾವಾಹಿಗಳಿಗೂ ಕಥೆ, ಚಿತ್ರಕತೆ, ಸಂಭಾಷಣೆಗಳನ್ನು ಚಿತ್ರಿಸಿದ್ದಾರೆ. ಅದರಲ್ಲಿ ಪ್ರಸಿದ್ಧಿ ಪಡೆದವುಗಳು 'ಗುಪ್ತಗಾಮಿನಿ', 'ಪ್ರೀತಿ ಇಲ್ಲದ ಮೇಲೆ', 'ಮನೆಯೊಂದು ಮೂರು ಬಾಗಿಲು', 'ಬಂದೇ ಬರುತಾವ ಕಾಲ', 'ಶರಪಂಜರ', 'ಕಲ್ಯಾಣಿ', 'ಶಿಕಾರಿ', 'ಬೆಳ್ಳಿತೆರೆ', 'ಯಜ್ಞಕೊಂಡ', ಇತ್ಯಾದಿ. ಜೋಗಿಯವರು 'ಮೌನಿ' ಸಿನಿಮಾಕ್ಕೆ ಚಿತ್ರಕಥೆ ಹಾಗೂ ಸಂಭಾಷಣೆಯನ್ನು 'ಕಾಡ ಬೆಳದಿಂಗಳು' ಸಿನಿಮಾಕ್ಕೆ ಕಥೆ, ಚಿತ್ರಕತೆ ಹಾಗೂ ಸಂಭಾಷಣೆಯನ್ನೂ 'ಕೇರಾಫ್ ಫುಟ್‌ಪಾತ್', 'ಮಿಸ್‌ಕ್ಯಾಲಿಪ್ಫೋರ್ನಿಯಾ' ಸಿನಿಮಾಗಳಿಗೆ ಚಿತ್ರಕಥೆಯನ್ನು ಬರೆದಿದ್ದಾರೆ.

ಜೋಗಿಯವರ ಪ್ರಮುಖ ಕೃತಿಗಳು : 'ಸೀಳು ನಾಲಿಗೆ', 'ಜೋಗಿ ಕತೆಗಳು', 'ರಾಯಭಾಗದ ರಹಸ್ಯ ರಾತ್ರಿ', 'ಕಾಡ ಹಾದಿಯ ಕತೆಗಳು' ಎಂಬ ಕಥಾ ಸಂಕಲನಗಳು; 'ಊರ್ಮಿಳಾ', 'ನದಿಯ ನೆನಪಿನ ಹಂಗು', 'ಯಾಮಿನಿ', 'ಹಿಟ್‌ವಿಕೆಟ್'; ಎಂಬ ಕಾದಂಬರಿಗಳು 'ಅಂಕಣ ಬರಹಗಳ ಸಂಕಲನಗಳಾದ 'ಕವಿ ಕಾಣದ್ದು ಕವಿ ಕಂಡದ್ದು', 'ಬಾಲಿವುಡ್ ಫಾಸಿಫ್', 'ಜಾನಕಿ ಕಾಲಂ', 'ಜಾನಕಿ ಕಾಲಂ–೨' ಇತ್ಯಾದಿ. ಕರ್ನಾಟಕದ ಪತ್ರಕರ್ತರ ಸಂಘವು ಜೋಗಿಯವರ ಅವರ ಅತ್ಯುತ್ತಮ ಸಿನಿಮಾ ವರದಿಗೆ ಪ್ರಶಸ್ತಿ ನೀಡಿದೆ. 'ಜಾನಕಿ ಕಾಲಂ'ಗೆ ಕರ್ನಾಟಕ ಸಂಘ ಶಿವಮೊಗ್ಗದವರು ಪ್ರಶಸ್ತಿ ನೀಡಿದ್ದಾರೆ. 'ಜೋಗಿ ಕಥೆಗಳು' ಕೃತಿಗೆ ವಿಶ್ವೇಶ್ವರಯ್ಯ ಪ್ರಶಸ್ತಿ ಸಂದಿದೆ. 'ಕಾಡ ಬೆಳದಿಂಗಳು' ಸಿನಿಮಾದ ಕಥೆಗೆ ಅತ್ಯುತ್ತಮ ಕತೆಯೆಂದು ಕರ್ನಾಟಕ ರಾಜ್ಯ ಪ್ರಶಸ್ತಿ ಲಭಿಸಿದೆ.

'ಜಾನಕಿ ಕಾಲಂ' ಜೋಗಿಯವರ ವಿಮರ್ಶಾ ಕೃತಿಯಾಗಿದ್ದು ಇದರಲ್ಲಿನ ಪ್ರಮುಖ ಲೇಖನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. "ವೈ.ಎನ್.ಕೆ. ಎಂಬ ಲಾಸ್ಟ್

ವಂಡರ್', 'ತೇಜಸ್ವಿಯ ನಿಗೂಢ ಜಗತ್ತು', 'ಬೋದಿಲೇರನ ಕವಿತೆಗಳು', 'ಪತ್ರಕರ್ತರಾಗುವ ಹುಮ್ಮಸ್ಸಿನ ಹುಡುಗ ಹುಡಗಿಯರಿಗೆ, 'ಮೊನ್ನೆ ಆಕಸ್ಮಿಕವಾಗಿ ಆಕಾಶ ಕಣ್ಣಿಗೆ ಬಿದ್ದು', 'ತುಂಗೆಯ ತೆನೆ ಬಳುಕಿನಲ್ಲಿ', 'ಕಾವ್ಯ ಕನ್ನಿಕೆಯ ಜಳಕ', 'ಓದುವುದಕ್ಕಿಂತ ಮಿಗಿಲಾದ ಸುಖ ಮತ್ತೊಂದಿಲ್ಲ'. ಇವು ಅವರ ಪ್ರಮುಖ ಲೇಖನಗಳಾಗಿವೆ.

**೨.೪. ತಾರಿಣಿ ಶುಭದಾಯಿನಿ ಆರ್.**

ವಿಮರ್ಶೆ ಹಾಗೂ ಕಾವ್ಯ ಪ್ರಕಾರಗಳಲ್ಲಿ ಹೆಸರು ಮಾಡಿರುವ ತಾರಿಣಿ ಶುಭದಾಯಿನಿಯವರು ಕನ್ನಡ ಪ್ರಾಧ್ಯಾಪಕರೂ ಕತೆಗಾರರೂ ಆದ ಟಿ.ಆರ್.ರಾಧಾಕೃಷ್ಣ ಅವರ ಮಗಳು. ಚಿತ್ರದುರ್ಗದಲ್ಲಿ ಬೆಳೆದ ಇವರು ಕುವೆಂಪು ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಎಂ.ಎ. ಮಾಡಿದರು. ಸದ್ಯ ಚಿತ್ರದುರ್ಗದಲ್ಲಿ ಉಪನ್ಯಾಸಕರಾಗಿ (ಸರ್ಕಾರಿ ಕಲಾಕಾಲೇಜು) ಕಾರ್ಯನಿರ್ವಹಿಸುತ್ತಿದ್ದಾರೆ. ತಾರಿಣಿಯವರ ಮೊದಲ ಕವನ ಸಂಕಲನ 'ತೋಡಿರಾಗ' ಪ್ರಕಟವಾಗಿದ್ದು ೨೦೦೫ರಲ್ಲಿ, ನಂತರ 'ಹೆಡೆಯಂತಾಡುವ ಸೊಡರು' ಎಂಬ ವಿಮರ್ಶಾ ಸಂಕಲನ ೨೦೦೭ರಲ್ಲಿ ಹೊರಬಂತು. ೨೦೦೮ರಲ್ಲಿ; ಇವರ ಎರಡನೆಯ ಕವಿತಾ ಸಂಕಲನ 'ಚಿತ್ರ ಗ್ಲಾನಿಯ ಮಾತು', 'ಅಕ್ಷರ ದಾಹ'ದಿಂದ ಪ್ರಕಟವಾಯಿತು. ಈಗ ಹೊಸ ಕವಿತೆಗಳ ಸಂಕಲನ 'ಒಂದು ತುಂಡು ಬೆಲ್ಲ' ಪ್ರಕಟಣೆಗೆ ಸಿದ್ಧವಾಗಿದೆ.

ಕಳೆದ ಒಂದು ದಶಕದಿಂದ ಕಾವ್ಯ ಮತ್ತು ವಿಮರ್ಶೆಯ ಕ್ಷೇತ್ರದಲ್ಲಿ ತಾರಿಣಿ ಶುಭದಾಯಿನಿ ಅವರು ಕೆಲಸ ಮಾಡುತ್ತಿದ್ದು, ಭಾವ ಪ್ರಧಾನವೂ ಸಂಶ್ಲೇಷಣ ಪ್ರಧಾನವೂ ಆದ ಕಾವ್ಯ ಹಾಗೂ ತಾತ್ವಿಕವೂ, ವೈಚಾರಿಕವೂ, ವಿಶ್ಲೇಷಣ ಪ್ರಧಾನವೂ ಆದ ವಿಮರ್ಶೆ–ಹೀಗೆ ಎರಡರಲ್ಲೂ ಅವರು ತಮ್ಮನ್ನು ಏಕಕಾಲದಲ್ಲಿ ತೊಡಗಿಸಿಕೊಂಡಿದ್ದಾರೆ. ಚಿತ್ರದುರ್ಗದ ಸರ್ಕಾರಿ ಪದವಿ ಕಾಲೇಜಿನಲ್ಲಿ ಇಂಗ್ಲೀಷ್ ಅಧ್ಯಾಪಕರಾಗಿರುವ ತಾರಿಣಿ ಅಪಾರವಾದ ಓದನ್ನು ಮಾಡಿದ್ದಾರೆ. ವೃತ್ತಿಯ ಹಿನ್ನೆಲೆಯ ಕಾರಣದಿಂದ ತಾರಿಣಿ ವಿಮರ್ಶೆಯಲ್ಲಿ ಪಶ್ಚಿಮದ ಲೇಖಕರ ಹೆಚ್ಚು ಉಲ್ಲೇಖಗಳಿವೆ. ಇವಕ್ಕೆ ಹೋಲಿಸಿದರೆ, ಆಧುನಿಕ ಪೂರ್ವ ಕನ್ನಡ ಸಾಹಿತ್ಯದ ಉಲ್ಲೇಖ ಕಡಿಮೆ. ತಾರಿಣಿ ಕೃತಿ ವಿಮರ್ಶೆ, ಸೈದ್ಧಾಂತಿಕ ವಿಮರ್ಶೆ, ಸಂಸ್ಕೃತಿ ವಿಮರ್ಶೆ ಹೀಗೆ ಹಲವು ಕವಲುಗಳಲ್ಲಿ ಬೆಳೆಯುತ್ತಿರುವ ಕನ್ನಡ ವಿಮರ್ಶೆಯಲ್ಲಿ ಸೈದ್ಧಾಂತಿಕ ಹಾಗೂ ಸಂಸ್ಕೃತಿ ವಿಮರ್ಶೆಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ ಎಂದು ವಿ.ಎನ್.ವೆಂಕಟಲಕ್ಷ್ಮಿಯವರು ಹೇಳುತ್ತಾರೆ.

ಪ್ರಸ್ತುತ ಪ್ರಬಂಧದಲ್ಲಿ ತಾರಿಣಿಯವರ 'ಹೆಡೆಯಂತಾಡುವ ಸೊಡರು' ಎಂಬ ವಿಮರ್ಶಾ ಕೃತಿಯಲ್ಲಿ ಪ್ರಮುಖವಾದ ಲೇಖನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. 'ದಂಡೆಗೆ ಬಂದ ಚಿಪ್ಪಿನಲ್ಲಿ ಎಪ್ಪತ್ತು ಸಾವಿರದ ಮುತ್ತು', 'ಕೇಳಯ್ಯ ಹುಲಿರಾಯ', 'ನಾನು ಮೆಟ್ಟಿದ ಭೂಮಿ

ಬೆಳೆವುದು, ಕನ್ನಡ ಸಾಹಿತ್ಯ', 'ಸ್ತ್ರೀ ಸಂವೇದನೆಯ ನೆಲೆಗಳು', 'ದಾವಣಗೆರೆ ಜಿಲ್ಲೆಯ ಕಥಾಸಾಹಿತ್ಯ', 'ಚಿತ್ರದುರ್ಗ ಜಿಲ್ಲೆಯ ಕಾವ್ಯ ಕಳೆದ ಒಂದು ದಶಕದಿಂದ', 'ಮಹಿಳೆ ಭಾವನಾತ್ಮಕ ಕ್ರಿಯಾತ್ಮಕ ಸಂವೇದನೆಗಳು', ಶ್ರೇಷ್ಠತೆಯ ಸವಾರಿ', 'ತೇಜಸ್ವಿಯವರ ಕಥಾನಕಗಳ ಹೊಸದಾರಿ- (ಕೆಲವು ಟಿಪ್ಪಣಿಗಳು) - ಇವು ಇಲ್ಲಿನ ಪ್ರಮುಖ ಲೇಖನಗಳಾಗಿವೆ.

**೨.೫. ಹರೀಶ ಜಿ.ಬಿ.**

ಹರೀಶ ಜಿ.ಬಿ. ೨೦.೧೨.೧೯೭೫ ಹಾಸನ ಜಿಲ್ಲೆಯಲ್ಲಿ ಜನಿಸಿದರು. ಇವರು ಮೈಸೂರು ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಪಡೆದರು. 'ಲೈಫ್ ಅಂಡ್ ವರ್ಕ್ಸ್ ಆಫ್ ಜೈನ್ ಪೋಯೆಟ್ ದೇವಚಂದ್ರ' ಎಂಬುದು ಅವರ ಪಿಎಚ್.ಡಿ. ಮಹಾಪ್ರಬಂಧವಾಗಿದೆ. ಹರೀಶ್ ಅವರು ಈವರೆಗೆ 'ನೀರ ಬೆಳಗು (ಸಂ.)' (೨೦೦೯), 'ಎನ್ನ ಅಂತರಂಗದ ಆತ್ಮ' (೨೦೦೮), 'ವೇದ ತಂತ್ರ ಸಂಸ್ಕೃತಿ', 'ಆಕಾಶಕ್ಕೆ ಆಶ್ಚರ್ಯ', 'ಬೆಳಕಿನಾಟ' (೨೦೦೫) ಮುಂತಾದ ಕೃತಿಗಳನ್ನು ಪ್ರಕಟಿಸಿದ್ದಾರೆ. ಹರೀಶರವರು ೨೦೦೩ರಿಂದ ೨೦೦೬ರವರೆಗೆ ಕನ್ನಡ ಉಪನ್ಯಾಸಕರಾಗಿ ಕ್ರೈಸ್ಟ್ ಕಾಲೇಜು (ಬೆಂಗಳೂರು)ನಲ್ಲಿ ಕಾರ್ಯ ನಿರ್ವಹಿಸಿದ್ದು, ಸದ್ಯ ತುಮಕೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಸಹ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ತತ್ವಶಾಸ್ತ್ರ, ಸಾಹಿತ್ಯ ಹಾಗೂ ಮಾನವಸಂಪನ್ಮೂಲ ನಿರ್ವಹಣೆ ಹರೀಶ ಅವರ ಅಧ್ಯಯನದ ಪ್ರಮುಖ ಕ್ಷೇತ್ರಗಳಾಗಿವೆ.

'ಬೆಳಕಿನಾಟ' ಹರೀಶರವರ ವಿಮರ್ಶಾ ಸಂಕಲನವಾಗಿದ್ದು, ಇದರಲ್ಲಿನ ಪ್ರಮುಖ ವಿಮರ್ಶಾ ಲೇಖನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. 'ವಸಾಹತುಶಾಹಿ ನೆರಳು-ಬೆಳಕಿನಾಟ ದೇವಚಂದ್ರನ ರಾಜಾವಳಿ ಕಥಾಸಾರ', 'ಕಾವ್ಯ, ಸಾಧನೆ ನಡುವಿನ ಆರ್ತ ಸಂಚಾರ : ಮಧುರ ಚೆನ್ನ', 'ಕುವೆಂಪು ಅವರ ವೈಚಾರಿಕತೆಯ ಇಕ್ಕಟ್ಟು-ಬಿಕ್ಕಟ್ಟುಗಳು' ಶಂಕರ ಮೊಕಾಶಿ ಪುಣೇಕರರ ಸಾಂಸ್ಕೃತಿಕ ಮಹತ್ವ', 'ಸಾಂಸ್ಕೃತಿಕ ವಿಮರ್ಶೆಯ ಸಂಕಥನಗಳು', 'ಕಾದಂಬರಿ ಲೋಕದ ಒಂಟಿ ಧ್ವನಿ ಕುಸಮಾಕರ ದೇವರ ಗಣ್ಣೂರು', 'ಸ್ವಾತಂತ್ರ್ಯೋತ್ತರ ಕನ್ನಡ ಕಾವ್ಯ ಮರು ಅವಲೋಕನ', 'ಡಿ.ಆರ್.ನಾಗರಾಜರ ವಿಮರ್ಶೆಯ ಸುತ್ತ' ಇವು ಇಲ್ಲಿನ ಪ್ರಮುಖ ಲೇಖನಗಳಾಗಿವೆ.

**೨.೬. ಕವಿತಾ ರೈ**

ಕವಿತಾ ರೈ ೧೫ ಅಕ್ಟೋಬರ್ ೧೯೭೪ರಲ್ಲಿ ಮಡಿಕೇರಿಯಲ್ಲಿ ಜನಿಸಿದರು. ತಂದೆ ಬಿ.ಎಸ್.ರಂಗನಾಥ್ ರೈ, ತಾಯಿ ಬಿ.ಎಲ್. ರಾಧಾ. ಕವಿತಾ ಅವರು ಮಂಗಳೂರು ವಿಶ್ವವಿದ್ಯಾಲಯದಿಂದ ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದರು. 'ಕನ್ನಡದ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ' ಎನ್ನುವುದು ಇವರ ಪಿಎಚ್.ಡಿ.

ಮಹಾಪ್ರಬಂಧವಾಗಿದೆ. ಇದು 'ಮಹಿಳೆ : ಅಸ್ತಿತ್ವದ ಸಂಕಥನ' ಎಂಬ ಹೆಸರಿನಲ್ಲಿ ೨೦೦೫ರಲ್ಲಿ ಪ್ರಕಟವಾಗಿದೆ. ಕವಿತಾ ರೈ ಈವರೆಗೆ 'ಹಕ್ಕಿ ಹರಿವ ನೀರು' (೨೦೦೦) ಹಾಗೂ 'ನೀರ ತೇರು' (೨೦೦೫) ಎಂಬ ಎರಡು ಕವಿತಾ ಸಂಕಲನಗಳನ್ನು ಹಾಗೂ 'ಅರಿವಿನ ನಡೆ'(೨೦೦೭), ವಿವಾಹ ಮತ್ತು ಕುಟುಂಬ' (೨೦೦೭), 'ನವ ವಿಸರ್ಗ' (೨೦೦೮) ಎಂಬ ಲೇಖನ ಸಂಗ್ರಹಗಳನ್ನು ಪ್ರಕಟಿಸಿದ್ದಾರೆ.

ಕವಿ, ವಿಮರ್ಶಕಿ, ಕಥೆಗಾರ್ತಿಯರಾಗಿ ದಶಕದಿಂದೀಚೆಗೆ ಗಮನ ಸೆಳೆಯುವ ಬರಹಗಳನ್ನು ಕೊಟ್ಟವರು ಕವಿತಾ ರೈ. ಸಾಹಿತ್ಯದ ಭಿನ್ನ ಪ್ರಕಾರಗಳಲ್ಲಿ ಕೆಲಸ ಮಾಡಿದರೂ ಕವಿ ಮತ್ತು ವಿಮರ್ಶಕಿಯಾಗಿ ಅವರು ಕೆಲವು ಕೃತಿಗಳನ್ನು ಹೊರ ತಂದಿದ್ದಾರೆ. ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಅತಿಥಿ ಉಪನ್ಯಾಸಕರಾಗಿ ಹಾಗೂ ಮಹಿಳಾ ಅಧ್ಯಯನ ಕೇಂದ್ರದಲ್ಲಿ ಸಂಶೋಧಕರಾಗಿ ಅವರು ಸೇವೆ ಸಲ್ಲಿಸಿರುತ್ತಾರೆ. ಈಗ ಮಂಗಳೂರಿನಲ್ಲಿ ಸಂದೇಶ ಲಲಿತಕಲಾ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

'ಅರಿವಿನಿ ನಡೆ' ಕವಿತಾ ರೈ ಅವರ ವಿಮರ್ಶಾ ಕೃತಿಯಾಗಿದ್ದು, ಇದರಲ್ಲಿನ ಪ್ರಮುಖ ವಿಮರ್ಶಾ ಲೇಖನಗಳನ್ನು ಇಲ್ಲಿನ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. 'ಜಾಗತೀಕರಣ ಮತ್ತು ಮಹಿಳಾ ಅಸ್ತಿತ್ವದ ಪ್ರಶ್ನೆ', 'ಗುಲಾಮಗಿರಿಯ ಸಂಕಥನ : ವಿವಾಹ ಮತ್ತು ಕುಟುಂಬ ವ್ಯವಸ್ಥೆ', 'ಅಸ್ಮಿತೆಯ ಹುಡುಕಾಟ : ಉದಾರವಾದಿ ಸಾಂಸ್ಕೃತಿಕ ನೆಲೆ', 'ಮಹಿಳೆಯರ ಬದುಕು : ಬದಲಾದ ದಿಕ್ಕು', 'ಪ್ರತಿಭಾ ಕಾವ್ಯ : ಒಂದು ಮರು ಓದು', 'ಇಂಗ್ಲೀಷ್ ಗೀತೆಗಳು ಅನುವಾದದ ವಿಭಿನ್ನ ಮಾದರಿ ಪಠ್ಯ ಮತ್ತು ಪ್ರಯೋಗಗಳ ತಾತ್ವಿಕ ನೆಲೆ', 'ಮೊದಲ ಘಟ್ಟದ ಜಾನಪದ ಸಂಗ್ರಹ ಮತ್ತು ಪಟ್ಟೋಲೆ ಪಳಿಮೆ', 'ಕೊಡಗಿನ ಹಬ್ಬಗಳು : ಅನನ್ಯತೆ ಬಹುರೂಪಿ ಆಕೃತಿ' – ಇವು ಇಲ್ಲಿರುವ ಮುಖ್ಯ ಲೇಖನಗಳಾಗಿವೆ.

# ಅಧ್ಯಾಯ ೩

# ಹೊಸ ತಲೆಮಾರಿನ ವಿಮರ್ಶಕರು : ಪರಂಪರೆಯ ಅನುಸಂಧಾನ

## ೩.೧ ವಿಕ್ರಮ ವಿಸಾಜಿ : ಪರಂಪರೆ ಜತೆಗಿನ ಅನುಸಂಧಾನ

'ಬೆಳಗಿನ ಮುಖ' ವಿಕ್ರಮ ವಿಸಾಜಿಯವರ ಪ್ರಮುಖ ವಿಮರ್ಶಾ ಕೃತಿಯಾಗಿದೆ. ಕೃತಿಯಾಳಗಿನ ಪ್ರಮುಖ ವಿಮರ್ಶಾ ಲೇಖನಗಳ ಮೂಲಕ ಪರಂಪರೆಯನ್ನು ಹೇಗೆ ಅವರು ಗ್ರಹಿಸಿದ್ದಾರೆ ಎಂಬುದನ್ನು ತಿಳಿಯಲು ಯತ್ನಿಸಬಹುದು.

ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಅನೇಕ ಹಿರಿಯ ಬರಹಗಾರರು ತಮ್ಮನ್ನು ವಿಮರ್ಶೆಯಲ್ಲಿ ತೊಡಗಿಸಿಕೊಂಡು ಬಂದಿದ್ದಾರೆ. ಹಿರಿಯ ವಿಮರ್ಶಕರ ಪ್ರಭಾವಗಳು ಕಿರಿಯ ವಿಮರ್ಶಕರ ಮೇಲೆ ಇರುವುದಲ್ಲದೆ ಅವರ ದಾರಿಯಲ್ಲೇ ಕೆಲವು ಕಿರಿಯರು ಸಾಗುತ್ತಿದ್ದಾರೆ. ವಿಭಿನ್ನ ದೃಷ್ಟಿಕೋನಗಳ ಮೂಲಕ ಪರಂಪರೆಯ ಅನುಸಂಧಾನದ ನೆಲೆಯಲ್ಲಿ ಈ ಎರಡು ತಲೆಮಾರಿನವರನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ವಿಕ್ರಮ ವಿಸಾಜಿಯವರು ಮಿದುಳು ಮತ್ತು ಹೃದಯದ ಪರಿಕಲ್ಪನೆಯೊಂದಿಗೆ ಜಾಣ್ಮೆ ಮತ್ತು ವಿವೇಕವನ್ನು ಅರ್ಥೈಸಲು ಹಿರಿಯ ಬರಹಗಾರರನ್ನು ಇಟ್ಟುಕೊಂಡು ಚರ್ಚೆ ನಡೆಸುತ್ತಾರೆ. ಬೇಂದ್ರೆ, ಅಡಿಗರ ಪದ್ಯಗಳು, ಲಂಕೇಶ್, ಅನಂತಮೂರ್ತಿಯವರ ಬರಹಗಳು, ಚಂದ್ರಶೇಖರ ಕಂಬಾರ ಮತ್ತು ಗಿರೀಶ್ ಕಾರ್ನಾಡರ ನಾಟಕಗಳ ಮೂಲಕ ವಿಸಾಜಿಯವರು ಬರಹದೊಳಗಿನ ಜಾಣ್ಮೆ ಮತ್ತು ವಿವೇಕವನ್ನು ಹೇಳುತ್ತಾರೆ. ಉತ್ತಮ ಬರಹದಲ್ಲಿ ಜಾಣ್ಮೆ, ವಿವೇಕ ಮುಖ್ಯವಾಗುತ್ತದೆ. ಲೇಖಕನ ಈ ಗುಣವು ಸಾಹಿತ್ಯ ರಚನೆಗೆ ಬೇಕು ಎಂಬ ನಿಲುವು ವಿಸಾಜಿಯವರದಾಗಿದೆ.

ಬರಹವು ಬರಹಗಾರನಲ್ಲಿ ಹೊಸತನದಿಂದ ಕೂಡಿದ್ದು ನೈತಿಕವಾಗಿ ಸಮಾಜವನ್ನು ತಿದ್ದುವ ಕೆಲಸ ಮಾಡಬೇಕೆಂದು ವಿಕ್ರಮ ವಿಸಾಜಿ ಹೇಳುತ್ತಾರೆ. "ನಮ್ಮ ಬರಹ ಎಷ್ಟೇ ವೈಚಾರಿಕ, ಬೌದ್ಧಿಕ, ಕಾವ್ಯಾತ್ಮಕ ಅಥವಾ ರೋಚಕವಾಗಿರಲಿ ಅದು ನೈತಿಕವಾಗಿ ಕಾಡದಿದ್ದರೆ ಅಂಥ ಬರಹಕ್ಕೆ ಘನತೆ ಪ್ರಾಪ್ತವಾಗುವುದಿಲ್ಲ"[೧] ಎನ್ನುತ್ತಾರೆ. ಸಮಾಜವನ್ನು ತಿದ್ದುವ ಕುರಿತು ಎಷ್ಟೇ ಬರೆದರೂ ವಿಮರ್ಶಕರಾದವರು ಬರಹಕ್ಕೆ ಬದ್ಧನಾಗದಿದ್ದರೆ ಅದು ವ್ಯರ್ಥವೆಂದು

ಅವರ ಅಭಿಪ್ರಾಯ. ಈಗಾಗಲೇ ನಮ್ಮ ಅನೇಕ ಹಿರಿಯ ಬರಹಗಾರರು ತಮ್ಮದೇ ದೃಷ್ಟಿಕೋನದಲ್ಲಿ ಸಮಾಜವನ್ನು ತಿದ್ದುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ಹಾಗೇ ನಮ್ಮ ಕಿರಿಯ ವಿಮರ್ಶಕರು ಪ್ರಸ್ತುತ ಸಮಸ್ಯೆಗಳ ಮೇಲೆ ಲೇಖನಗಳನ್ನು ಬರೆದರೂ ಅಲ್ಲಿನ ಜನಸಾಮಾನ್ಯರ ನೋವಿಗೆ ಅವರ ಮನಸ್ಸು ಮಿಡಿಯದಿದ್ದರೆ ಏನು ಪ್ರಯೋಜನ. ಆದ್ದರಿಂದ ಬರಹಕ್ಕಿಂತ ವಿಮರ್ಶಕರ ನೈತಿಕ ಬದ್ಧತೆ ಮುಖ್ಯವಾಗುತ್ತದೆ. ಇಂತಹ ಬರಹಗಳು ಹೆಚ್ಚು ಮೌಲ್ಯಯುತವಾದವು ಎಂಬುದು ವಿಕ್ರಮ ವಿಸಾಜಿಯವರ ನಿಲುವಾಗಿದೆ.

ಕೆಲವೊಬ್ಬ ಹೆಸರಾಂತ ವಿಮರ್ಶಕರು ತಾತ್ವಿಕತೆಯನ್ನು ಹೇಳುವಾಗ ಒಂದೇ ನೆಲೆಗೆ ಅಂಟಿಕೊಂಡು ಹೇಳುವ ಕ್ರಮವನ್ನು ವಿಕ್ರಮ ವಿಸಾಜಿ ವಿರೋಧಿಸುವರು. "ಡಿ.ಆರ್.ನಾಗರಾಜರಂಥ ಧೀಮಂತ ವಿಮರ್ಶಕರು ಕೂಡ ತಾತ್ವಿಕತೆಯನ್ನು ಗುರುತಿಸುವಾಗ ಕಂಬಾರರ ಕಾವ್ಯಕ್ಕೆ ಕಾಮವೇ ಮಾಧ್ಯಮ"[೨] ಎಂದು ಹೇಳುವುದನ್ನು ವಿಕ್ರಮ ವಿಸಾಜಿ ಖಂಡಿಸುತ್ತಾರೆ. ಏಕೆಂದರೆ ಕಾಮ ಕಂಬಾರರ ಕಾವ್ಯದಲ್ಲಿ ಪ್ರಸ್ತಾಪಿತವಾಗುವ ಒಂದು ದೊಡ್ಡ ಅಂಶ. ಅಲ್ಲಿ ಎಲ್ಲವೂ ಅದೇ ಅಲ್ಲ ಎಂಬುದು ಅವರ ಅಭಿಪ್ರಾಯ. ಇದಕ್ಕೆ ಕಂಬಾರರ ಕಾವ್ಯವನ್ನು ವಿಸಾಜಿಯವರು ಆಳವಾಗಿ ಸಂಶೋಧನೆ ಮಾಡಿರುವುದು ಒಂದು ಕಾರಣವಾದರೆ, ಕಂಬಾರರ ಬಗೆಗಿನ ಅವರ ವೈಯಕ್ತಿಕ ಒಲವು ಇನ್ನೊಂದು ಕಾರಣವಾಗಿದೆ. ಒಂದು ಕೃತಿಯನ್ನೂ ಲೇಖನವನ್ನೂ ವಿಮರ್ಶೆ ಮಾಡುವಾಗ ಯಾರೋ ನೋಡಿದ ದೃಷ್ಟಿಕೋನದಲ್ಲೇ ನೋಡುವುದಕ್ಕಿಂತ ಅದರಾಚೆಗಿನ ನೆಲೆಗಳನ್ನು ಹುಡುಕಬೇಕೆಂಬುದು ವಿಸಾಜಿಯವರ ಅಭಿಪ್ರಾಯ.

ತಾತ್ವಿಕವಾಗಿ ತಾವು ನಂಬಿದ ನಿಲುವುಗಳೊಂದಿಗೆ ಮುಖಾಮುಖಿಯಾಗದ ಚೆನ್ನ ಬಸವಣ್ಣ ಅಲ್ಲಿಯೇ ಉಳಿದರೆ, ತಮ್ಮದೇ ತಾತ್ವಿಕ ವಿಚಾರಗಳೊಂದಿಗೆ ಮುಖಾಮುಖಿಯಾದ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮ ನಮ್ಮ ನಡುವೆ ಬಹುಕಾಲ ಉಳಿದರು. ಹಾಗೇ ಯುವ ಬರಹಗಾರರು ಚನ್ನಬಸವಣ್ಣರಂತೆ ನಿಂತ ನೀರಾಗದೆ ಹರಿಯುವ ನದಿಗಳಾಗಬೇಕು. ತಮ್ಮದೇ ತಾತ್ವಿಕ ದೃಷ್ಟಿಕೋನಗಳ ಮೂಲಕ ಅಲ್ಲಮ, ಬಸವಣ್ಣರಂತೆ ಮುಖಾಮುಖಿಯಾದಾಗ ಯುವ ಬರಹಗಾರರು ಸಾಹಿತ್ಯ ಕೃಷಿಯಲ್ಲಿ ಉಳಿಯಲು ಸಾಧ್ಯ. ಹೀಗೆ ಹಿರಿಯ ಕವಿಗಳ ಮೂಲಕ ಕಿರಿಯ ಬರಹಗಾರರು ಬದಲಾಗಬೇಕು. ಸಾಂಸ್ಕೃತಿಕ ಪರಂಪರೆಯೊಂದಿಗೆ ಮುಖಾಮುಖಿ ಯಾಗಬೇಕು ಎಂದು ವಿಸಾಜಿಯವರ ಆಶಯ ವ್ಯಕ್ತವಾಗಿದೆ. ಆಧುನಿಕ ಲೇಖಕರ ಚರ್ಚೆಯಲ್ಲಿ ಪರಂಪರೆಯಾಗಿ ವಚನ ಸಾಹಿತ್ಯ ಬಳಕೆಯಾಗುತ್ತಿದೆ.

ವಿಕ್ರಮ ವಿಸಾಜಿಯವರು ಯುವ ಬರಹಗಾರರ ಅಭಿವ್ಯಕ್ತಿಯನ್ನು ಹೀಗೆ ಗ್ರಹಿಸಿದ್ದಾರೆ. "ತನ್ನ ಊರಿನ -ಕೇರಿಯ ಬದುಕಿನೊಂದಿಗೆ ಶಕ್ತಿಯುತ ರೂಪದ ಕಾವ್ಯ ನೇಯುತ್ತಿರುವ ಎನ್.ಕೆ.ಹನುಮಂತಯ್ಯ ಕೋಮುವಾದದ ಉರಿಯಲ್ಲಿ ತನ್ನ ಅನುಭವಗಳಿಗೆ ಕಾವು ಕೊಡುವ

ಪೀರ್‌ಬಾಷಾ, ಪ್ರೇಮ ಮತ್ತು ವಿರಹವನ್ನು ಎಳೆ-ಎಳೆಯಾಗಿ ಕಟ್ಟಿಕೊಡುವ ಚಂದ್ರ ತುರ್ವಿಹಾಳ, ಗ್ರಾಮೀಣ ಬದುಕನ್ನು ಕಥೆಯಾಗಿಸುವ ಕಲಿಗಣನಾಥ, ವಿನೂತನ ಪ್ರತಿಮೆಗಳನ್ನು ಸೃಷ್ಟಿಸುವ ಹರಿಯಪ್ಪ ಪೇಜಾವರ, ಗ್ರಾಮೀಣ ನುಡಿಗಟ್ಟುಗಳ ಕಾವ್ಯತೋರಣ ಕಟ್ಟುವ ಕೆ.ವೈ.ನಾರಾಯಣ ಸ್ವಾಮಿ"[1] ಇವರೊಂದಿಗೆ ಸುಧಾಶರ್ಮ ಚವತ್ತಿ, ಪಿ. ಚಂದ್ರಿಕಾ, ಸುಮಂಗಲಾ ಬಾದರದಿನ್ನಿ, ಕವಿತಾರೈ, ಎಂ.ಆರ್ ಭಗವತಿ, ಗೀತಾಹೆಗಡೆ ಮುಂತಾದ ಬರಹಗಾರರನ್ನು ನವ್ಯ ಮತ್ತು ಬಂಡಾಯದ ಲೇಖಕಿಯರೊಂದಿಗೆ ಇಟ್ಟು ಅವರ ಸಾಹಿತ್ಯ, ಬರಹ ಬದ್ಧತೆಯ ಕುರಿತು ವಿಸ್ತೃತ ಅಧ್ಯಯನಗಳನ್ನು ಮಾಡಬಹುದು. ಮೇಲಿನ ಕೆಲವು ಲೇಖಕರ ತಿರಸ್ಕೃತಗೊಂಡ ಬರಹಗಳನ್ನು ಅರಿತು ಬೆಳೆಸುವ ಮನೋಭಾವ ವಿಕ್ರಮ ವಿಸಾಜಿಯಲ್ಲಿ ಇದೆ. ಇದು ಅವರ ಅಧ್ಯಯನದ ವ್ಯಾಪಕತೆಗೆ ಹಿಡಿದ ಕೈಗನ್ನಡಿಯಾಗಿದೆ.

ಹೈದ್ರಾಬಾದ್ ಕರ್ನಾಟಕದ ಸಾಹಿತ್ಯವನ್ನು ಕುರಿತು ಚರ್ಚಿಸಲು ಎಚ್.ಎಸ್. ರಾಘವೇಂದ್ರರಾವ್ ರಹಮತ್ ತರೀಕೆರೆ ಮುಂತಾದವರು ಪ್ರಾಮಾಣಿಕವಾಗಿ ಪ್ರಯತ್ನ ಪಟ್ಟರು. ಆದರೆ ಮುಂದೆ ಯಾವ ವಿಮರ್ಶಕರೂ ಈ ಭಾಗದ ಕಡೆ ದೃಷ್ಟಿ ಹಾಯಿಸಲಿಲ್ಲ. ಅಮರೇಶ ನುಗಡೋಣಿ, ರಾಜಶೇಖರ ಹತಗುಂದಿ, ಸೂಕ್ಷ್ಮವಾಗಿ ಇಲ್ಲಿನ ಸಾಹಿತ್ಯವನ್ನು ಅವಲೋಕಿಸಿದರು. ಆದರೆ ಉಳಿದಂತೆ ಲೇಖಕರ, ಕೃತಿಯ ಕೃತಿಕಾರರ ಪಟ್ಟಿಕೊಡುವಲ್ಲಿಯೇ ನಿರತರಾದರು. ಯಾರೂ ತಮ್ಮನ್ನು ಸಾಹಿತ್ಯಕವಾಗಿ ತೊಡಗಿಸಿಕೊಳ್ಳಲಿಲ್ಲ. ಹಿಂದಿನ ಕೆಲ ವಿಮರ್ಶಕರು, ಲೇಖಕರು, ಕವಿಗಳು ಬೆರಳೆಣಿಕೆಯಷ್ಟು ಈ ಭಾಗದ ಸಾಹಿತ್ಯವನ್ನು ನೋಡಿದರೆ ವಿನಾ ಭದ್ರವಾದ ಅಡಿಪಾಯವನ್ನು ಯಾರು ಹಾಕಲಿಲ್ಲ. ಇನ್ನೂ ಮುಂದಾದರೂ ಈ ಭಾಗದ ಕಡೆ ಸಾಹಿತ್ಯ ವಿಮರ್ಶಕರು, ಲೇಖಕರು ಸಾಹಿತ್ಯಿಕ ಚಟುವಟಿಕೆಯಲ್ಲಿ ತೊಡಗಿಕೊಳ್ಳಬೇಕೆಂಬುದು ವಿಸಾಜಿಯವರ ನಿಲುವಾಗಿದೆ.

ವಿಕ್ರಮ ವಿಸಾಜಿಯವರು ಹೈದ್ರಾಬಾದ್ ಕರ್ನಾಟಕದ ನವೋದಯ ಕಾಲದ ಕಾವ್ಯ ಪರಂಪರೆಯನ್ನು ಆರಂಭಿಸಿದ ಎರಡು ತಲೆಮಾರಿನ ಕವಿಗಳನ್ನು ಹೆಸರಿಸುತ್ತಾರೆ. ಮೊದಲ ಪೀಳಿಗೆಯಲ್ಲಿ ಸಿದ್ದಯ್ಯ ಪುರಾಣಿಕ, ಡಾ.ಕೆ.ಮುದ್ದಣ್ಣ, ಪಂಚಾಕ್ಷರಿ ಹಿರೇಮಠ, ಶಾಂತಕರಸ, ಶೈಲಜಾ ಉಡಚಣ ಮೊದಲಾದವರು ಬರುತ್ತಾರೆ. ಎರಡನೇ ತಲೆಮಾರಿನವರು ಭಾವ ಭಾಷೆಯಲ್ಲಿ ಸ್ವಲ್ಪ ಮಟ್ಟಿನ ಭಿನ್ನತೆ ಸಾಧಿಸಿದರು. ಇವರ ಮೇಲೆ ಕುವೆಂಪು, ಬೇಂದ್ರೆಯ ದಟ್ಟ ಪ್ರಭಾವ ಪ್ರೇರಣೆ ಇರುವುದನ್ನು ಕಾಣಬಹುದು. ಬೇಂದ್ರೆಯ ಕವಿತೆಯಲ್ಲಿನ ಸ್ವಂತಿಕೆಯ ಗುಣ ಮತ್ತು ಕುವೆಂಪು ಕವಿತೆಗಳ ಸರಳ ಮಾದರಿಯಲ್ಲಿರುವುದರಿಂದ ಎರಡು ತಲೆಮಾರಿನ ಕವಿಗಳು ಈ ಹಿರಿಯ ಕವಿಗಳ ಸಾಹಿತ್ಯ ಪರಂಪರೆಯನ್ನು ಮುಂದುವರೆಸಿದರು. ಆದರೆ ಇಷ್ಟೆಲ್ಲಾ ಪ್ರಭಾವವಿದ್ದರೂ ಇಲ್ಲಿ ಸಾಹಿತ್ಯ ವಿಸ್ತೃತವಾಗಿ ಬೆಳೆಯದೆ ಇರುವುದಕ್ಕೆ ಅವರಲ್ಲಿ ಬೇಸರ

ಉಂಟಾಗಿದೆ. ಹೀಗೆ ಹಿಂದುಳಿದ ಭಾಗದಿಂದ ಸಾಹಿತ್ಯ ಬರೆದ ಬರಹಗಾರರ ಮುಂದೆ ಸಾಹಿತ್ಯ ರಚನೆಯನ್ನು ಕೈ ಬಿಟ್ಟಿರುವುದಕ್ಕೆ ವಿಸಾಜಿ ಆತಂಕಕ್ಕೆ ಒಳಗಾಗುತ್ತಾರೆ. ಅವರಲ್ಲಿ ಮತ್ತೆ ಅದರಲ್ಲೂ ಹೈದ್ರಾಬಾದ್ ಕರ್ನಾಟಕದ ಭಾಗದಿಂದ ಸಾಹಿತ್ಯ ಚಟುವಟಿಕೆಗಳು ಆರಂಭವಾಗಿ ಉತ್ತಮ ಕಾವ್ಯ, ಕಥೆ, ಕಾದಂಬರಿ ವಿಮರ್ಶೆಗಳು ಬರಬೇಕೆಂಬ ಮನೋಭಾವ ವಿಸಾಜಿಯವರಲ್ಲಿದೆ.

ಕೆಲವು ಬರಹಗಾರರು ಬರುಬರುತ್ತಾ ಸಾಹಿತ್ಯ ಚಟುವಟಿಕೆಯಲ್ಲಿ ಆಸಕ್ತಿಯನ್ನು ಕಳೆದುಕೊಂಡಿರುವ ಬಗ್ಗೆ ವಿಸಾಜಿಯವರು ಹೇಳುತ್ತಾ, ನವ್ಯ ಮತ್ತು ಬಂಡಾಯದ ಮನೋಧರ್ಮದ ಕೊಂಡಿಯಂತೆ ಕಂಡು ಬರುವ ಶೈಲಜಾ ಉಡಚಣ, ಎಚ್.ಎಸ್.ಮುಕ್ತಾಯಕ್ಕ, ಪ್ರೇಮಾ ಸಿರ್ಸೆ ಅವರು ಭಿನ್ನತೆಯಿಂದ ಕಂಡು ಬಂದರು. ಮುಂದೆ ಇವರ ಕಾವ್ಯ ನಿರಾಶಾದಾಯಕವಾಗಿದ್ದರಿಂದ ಮುಂದಿನ ಯುವ ಬರಹಗಾರರು ಅಧ್ಯಯನ ನಡೆಸಬೇಕು. ಕಾವ್ಯ ನಿರಾಶಾದಾಯಕವಾಗಿದ್ದಕ್ಕೆ ಕಾರಣಗಳನ್ನು ಅರಿತು, ಅದಕ್ಕೆ ಉತ್ತರ ಕಂಡುಕೊಳ್ಳಬೇಕು. ನಂತರ ಹೊಸ ತಲೆಮಾರಿನವರು ಈ ಮನೋಭಾವದವರಾಗದಂತೆ ಜಾಗ್ರತೆವಹಿಸಬೇಕು ಎಂದು ಹೇಳುತ್ತಾರೆ.

**೩.೨. ಬಿ.ಎಂ.ಪುಟ್ಟಯ್ಯ : ಪರಂಪರೆ ಜತೆಗೆ ಅನುಸಂಧಾನ**

ಪುಟ್ಟಯ್ಯರವರ 'ಕದಡು' ವಿಮರ್ಶಾ ಕೃತಿಯಲ್ಲಿನ ಪ್ರಮುಖ ಲೇಖನಗಳನ್ನು ವಿಮರ್ಶೆಗೆ ಒಳಪಡಿಸಿದೆ. ಆ ಮೂಲಕ ಪರಂಪರೆಯೊಂದಿಗೆ ಹೇಗೆ ಅನುಸಂಧಾನ ನಡೆಸಿದ್ದಾರೆ ಎಂದು ಇಲ್ಲಿ ನೋಡಬಹುದು.

ಬಿ.ಎಂ.ಪುಟ್ಟಯ್ಯರವರು ಇದುವರೆಗೂ ನಾವು ಗ್ರಹಿಸಿರುವ ಸತ್ಯ ಹರಿಶ್ಚಂದ್ರ ಕಥೆಯನ್ನು ಭಿನ್ನ ನೆಲೆಯಲ್ಲಿ ಗ್ರಹಿಸಿದ್ದಾರೆ ಭಾರತೀಯ ಅನೇಕ ಭಾಷೆಗಳಲ್ಲಿ ಲಿಖಿತವಾಗಿ ಅನೇಕ ಕೃತಿಗಳು ಲಭ್ಯವಾಗಿವೆ. ಆದರೆ ಜನಪದರ ಮೌಖಿಕ ಪರಂಪರೆಯಲ್ಲಿ ಇರಬಹುದಾದ ಹರಿಶ್ಚಂದ್ರ ಕತೆ ಲಾವಣಿಗಳು ನಮಗೆ ಸಿಕ್ಕಿಲ್ಲವೆಂದು ಅವರು ಹೇಳುತ್ತಾರೆ. ಒಂದು ವೇಳೆ ಮೌಖಿಕ ಪರಂಪರೆಯಲ್ಲಿ ದೊರೆತರೆ ಇದುವರೆಗೂ ನಾವು ಗ್ರಹಿಸಿರುವ ಕಥೆಯು ಭಿನ್ನ ಆಯಾಮಗಳನ್ನು ಪಡೆಯಬಹುದೆಂದು ಅವರು ಹೇಳುತ್ತಾರೆ. ಇದುವರೆಗೂ ಲಿಖಿತವಾಗಿ ಗ್ರಹಿಸಿರುವ ಕಥೆಯನ್ನು ಹೊಡೆದು ದೇಶೀಯ ನೆಲೆಯಲ್ಲಿ ನೋಡಬೇಕೆಂದು ಅವರು ಹೇಳುತ್ತಾರೆ. ಈಗಾಗಲೇ ಒಂದು ಪರಂಪರೆ ಸತ್ಯಹರಿಶ್ಚಂದ್ರನೆಂದು ಕರೆದಿರುವ ರಾಜನನ್ನು ಇನ್ನೊಂದು ನೆಲೆಯಲ್ಲಿ ಅದರ ಸತ್ಯಾಸತ್ಯತೆ ಕುರಿತು ಶೋಧಿಸುವ ಅವಶ್ಯಕತೆಯನ್ನು ಅವರು ಹೇಳುತ್ತಾರೆ.

'ಪರಂಪರೆ ಎನ್ನುವುದು ಅಪ್ರಸ್ತುತವಾಗುವುದಿಲ್ಲ. ಕಾಲಕಾಲಕ್ಕೆ ಹಳತನ್ನು ಬಿಡುತ್ತ ಹೊಸರೂಪು ಪಡೆಯುತ್ತ ಮುಂದುವರೆಯುವ ಪ್ರಕ್ರಿಯೆಗೆ ಪರಂಪರೆಯನ್ನುತ್ತೇವೆ.'[೨] ಈ ನೆಲೆಯಲ್ಲಿ ಸತ್ಯಹರಿಶ್ಚಂದ್ರ ಕಥೆಯನ್ನು ಸಹ ಪುಟ್ಟಯ್ಯನವರು ಈಗಾಗಲೇ ಒಂದು ಪರಂಪರೆ ರೂಪಿಸಿರುವ

ಹರಿಶ್ಚಂದ್ರನ ವ್ಯಕ್ತಿತ್ವವನ್ನು ಬೇರೆ ನೆಲೆಯಲ್ಲಿ ಗ್ರಹಿಸುತ್ತಿದ್ದಾರೆ. ಹೊಸ ತಲೆಮಾರಿನ ಮುಖ್ಯ ವಿಮರ್ಶಕರಾದ ಪುಟ್ಟಯ್ಯನವರು ಇನ್ನೊಂದು ಪರಂಪರೆಯ ನೆಲೆಯಲ್ಲಿ ಹರಿಶ್ಚಂದ್ರ ಕಥೆಯನ್ನು ಅವರು ಅರ್ಥೈಸಲು ಹೊರಟಿದ್ದಾರೆ. ಹೀಗೆ ವಿಮರ್ಶೆಯೆಂಬುದು ಒಂದೇ ಕಡೆ ನೆಲೆನಿಲ್ಲದೆ ಕಾಲಕ್ಕೆ ತಕ್ಕಂತೆ ಬದಲಾಗುವ ಮೂಲಕ ಹೊಸತನವನ್ನು ತರಬೇಕೆಂಬ ಅವರ ಆಶಯವು ಇಲ್ಲಿ ವ್ಯಕ್ತವಾಗಿದೆ. ಈಗಾಗಲೇ ರೂಪಿಸಿರುವ ಮಾದರಿಯನ್ನು ಒಡೆದು ಬೇರೊಂದು ಮಾದರಿಯನ್ನು ಕಟ್ಟಿಕೊಡುವ ವಿಮರ್ಶಕರು ಅವರಿಗೆ ಆಪ್ತರಾಗುತ್ತಾರೆ.

ಪುಟ್ಟಣ್ಣನವರು ರಾಜನ ಸತ್ಯ, ರಾಜತ್ವದ ಸತ್ಯಗಳೇ ಪ್ರಧಾನವೆಂದು ತೋರಿಸುವ ಒಂದು ಕಾಲದ ಪರಂಪರೆಯನ್ನು ಇಂದಿನ ಕಾಲದ ಸನ್ನಿವೇಶಕ್ಕೆ ಹೋಲಿಸುವ ಪ್ರಯತ್ನವನ್ನು ಮಾಡಿದ್ದಾರೆ. ಹರಿಶ್ಚಂದ್ರನ ಕುಟುಂಬದ ಸಮಸ್ಯೆಯನ್ನು ಜನರ ಸಮಸ್ಯೆಯೆಂದು ಆಳುವ ವರ್ಗ ಬಿಂಬಿಸಿದೆ. ಹಾಗೇ ಇಂದಿನ ಅಮೇರಿಕಾದಂತಹ ಮುಂದುವರೆದಿರುವ ದೇಶಗಳು ತಮ್ಮ ಸಮಸ್ಯೆಗಳನ್ನು ಜಗತ್ತಿನ ಸಮಸ್ಯೆಗಳು ಎನ್ನುವಂತೆ ಬಿಂಬಿಸಲು ಹೊರಟಿವೆ. ಹೀಗೆ ಎರಡು ಕಾಲಘಟ್ಟದ ಸಮಸ್ಯೆಗಳನ್ನು ಗುರುತಿಸುವ ಮೂಲಕ ಒಂದು ಸಮಸ್ಯೆ ಮುಂದುವರೆದು ಕಾಲಾಂತರದಲ್ಲಿ ಬೇರೆ ನೆಲೆಯಲ್ಲಿ ಅಧಿಕಾರ ವ್ಯಕ್ತವಾಗಿರುವುದನ್ನು ಅವರು ಕೃತಿಯ ಮೂಲಕ ವ್ಯಕ್ತಪಡಿಸಿದ್ದಾರೆ. ಒಂದು ಕೃತಿಯೊಳಗಿನ ಪ್ರಭುತ್ವದ ದಬ್ಬಾಳಿಕೆಯನ್ನು ಮುಂದಿನ ಕಾಲಘಟ್ಟದಲ್ಲಿ ಮುಂದುವರೆದಿರುವ ಕ್ರಮವನ್ನು ಅವರು ಟೀಕಿಸುತ್ತಾರೆ. ವಿಮರ್ಶಕರಾದವರು ಕೆಳವರ್ಗದ ನೆಲೆಯಲ್ಲಿ ಅವರ ದಬ್ಬಾಳಿಕೆಯ ಕ್ರೌರ್ಯವನ್ನು ಅನಾವರಣ ಮಾಡುವ ಮನೋಭಾವ ಬೆಳೆಸಿಕೊಳ್ಳಬೇಕೆಂದು ಅವರು ಬಯಸುತ್ತಾರೆ. ಕಾಲದೊಂದಿಗೆ ಪರಂಪರೆ ಬದಲಾಗಿದೆಯೇ ಹೊರತು ಅಲ್ಲಿನ ಸಾಮಾಜಿಕ ಸಮಸ್ಯೆ ಶ್ರೇಣೀಕರಣ ಸ್ಥಿತಿ ಬದಲಾಗದೇ ಇರುವುದನ್ನು ಪರಂಪರೆಯ ನೆಲೆಯಲ್ಲಿ ಅವರು ಗುರುತಿಸುತ್ತಾರೆ.

ದಲಿತ ಸಾಹಿತ್ಯ ಪರಂಪರೆಯ ಕುರಿತು ಹೀಗೆ ಅವರು ಹೇಳುವರು ಇಂದು ದಲಿತ ಸಾಹಿತ್ಯವೆಂದರೆ ಕೆಲವು ದಲಿತ ಸಾಹಿತಿಗಳ ಪಟ್ಟಿಕೊಟ್ಟು ಇದೇ ಎಂದು ಹೇಳುವ ಜನರ ಕ್ರಮವನ್ನು ಅವರು ವಿರೋಧಿಸುತ್ತಾರೆ. ದಲಿತ ಜನರ ನೋವು, ಆಕ್ರೋಶ, ಡಿ.ಎಸ್.ಎಸ್. ರೂಪುಗೊಂಡ ಚಾರಿತ್ರಿಕ ಸಂದರ್ಭ, ಗೋಡೆ ಬರಹ, ಚಳುವಳಿಯಲ್ಲಿ ಹಾಡುತ್ತಿದ್ದ ಹಾಡುಗಳು ಹಾಗೂ ಬಿ.ಕೃಷ್ಣಪ್ಪ, ಸಿದ್ದಲಿಂಗಯ್ಯ, ಮುಳ್ಳೂರ ನಾಗರಾಜ ಮುಂತಾದವರ ಹೆಸರುಗಳ ಮೂಲಕ ಒಂದು ಪರಂಪರೆಯಲ್ಲಿ ಘಟಿಸಿದ ಅನುಭವಗಳೇ ದಲಿತ ಸಾಹಿತ್ಯವೆಂದು ಅವರು ಹೇಳುವರು. ಇಂತಹ ದಲಿತ ಸಾಹಿತ್ಯ ಇಂದು ಸೀಮಿತ ವ್ಯಾಪ್ತಿಗೆ ಒಳಗಾಗಿರುವುದನ್ನು ಅವರು ಬಲವಾಗಿ ವಿರೋಧಿಸುವರು. ಕಳೆದ ೩೦ ವರ್ಷದ ದಲಿತ ಸಾಹಿತ್ಯದ ಸ್ಥಿತ್ಯಂತರಗಳನ್ನು ಹೊಸತಲೆಮಾರಿನ ವಿಮರ್ಶಕರು ಪುನರ್ ಚರ್ಚೆಗೆ ಒಳಪಡಿಸುವ ಕೆಲಸವಾಗಬೇಕೆಂದು

ಅವರು ಹೇಳುವರು. ಆ ಮೂಲಕ ಹೊಸತೊಂದು ನೆಲೆಯಲ್ಲಿ ದಲಿತ ಸಾಹಿತ್ಯದ ಚಿಂತನೆಗಳು ನಡೆಯಬೇಕೆಂಬ ಆಶಯವನ್ನು ಅವರು ವ್ಯಕ್ತಪಡಿಸಿದ್ದಾರೆ.

ದಲಿತ ಸಾಹಿತ್ಯದ ಕುರಿತು ಇರುವ ಭಿನ್ನ ನಿಲುವುಗಳು ಅಥವಾ ವೈರುಧ್ಯಗಳನ್ನು ಪುಟ್ಟಯ್ಯ ಹೀಗೆ ಗುರುತಿಸುತ್ತಾರೆ: "ದೊಡ್ಡ ಗೌಡರ ಬಾಗಿಲೀಗೆ ನಮ್ಮ ಮೂಳೆಯ ತ್ವಾರಣ ನಮ್ಮ ಜನಗಳ ಕಾಲು ಕೈಯಿ ಕಂಬ ಅವರ ಹಟ್ಟಿಗೆ ಎಂಬ ಸಿದ್ದಲಿಂಗಯ್ಯನವರ ಹಾಡಿನ ವಾಸ್ತವ ಒಂದು ಕಡೆಗಿದೆ. ಇದೇ ಪದ್ಯವನ್ನು ಕುರಿತು 'ಉತ್ಪ್ರೇಕ್ಷಾಲಂಕಾರ' ಎಂಬುದಾಗಿ ವಿಮರ್ಶೆ ಹೆಸರಿನಲ್ಲಿ ಆದೇಶ ಮಾಡಿರುವ ಫ್ಯೂಡಲ್ ಹೇಳಿಕೆ ಅದರ ಜೊತೆಯಲ್ಲಿದೆ. ತಲತಲಾಂತರಗಳಿಂದ ಭೂ ಮಾಲಿಕರ ದರ್ಪ, ದೌರ್ಜನ್ಯಗಳಿಗೆ ಕ್ರೂರವಾಗಿ ಕೊಲೆಯಾಗಿರುವ ದುರಂತ ಇತಿಹಾಸ ಇಂಡಿಯಾದ ಕೇರಿ ಕೇರಿಗಳಲ್ಲಿದೆ"[೫]

ಹಿಂದಿನ ಕಾಲದಿಂದಲೂ ಇಂದಿನವರೆಗೂ ದಲಿತರ ಮೇಲೆ ದೌರ್ಜನ್ಯಗಳು ನಡೆಯುತ್ತಲೆ ಇವೆ. ಸಾಹಿತ್ಯದ ಮೂಲಕ ಹಿಂದಿನ ತಲೆಮಾರುಗಳಿಂದ ಅನುಭವಿಸಿಕೊಂಡು ಬಂದ ನೋವುಗಳನ್ನು ರಮ್ಯ ವಿಮರ್ಶೆಗೆ ಒಳಪಡಿಸಿ ನೈಜ ಸ್ಥಿತಿಯನ್ನು ಮರೆಯುವ ಕ್ರಮವನ್ನು ಅವರು ವಿರೋಧಿಸುವರು. ಪ್ರಸ್ತುತ ಕಾಲದಲ್ಲೂ ದಲಿತರ ಮೇಲೆ ನಡೆಯುತ್ತಿರುವ ಭೂಮಾಲಿಕರ ದರ್ಪ, ದೌರ್ಜನ್ಯಗಳು ನಿಂತಿಲ್ಲವೆಂದು ಅವರು ಹೇಳುತ್ತಾರೆ. ಇನ್ನೂ ಮುಂದಾದರೂ ದಲಿತ ಸಾಹಿತ್ಯ ಬದುಕಿನ ಕಡೆ ಹಿಂದಿನಿಂದ ಇಂದಿನವರೆಗೂ ಸಾಗಿ ಬಂದಿರುವ ಓದಿನ ಕ್ರಮವನ್ನು ಚರ್ಚೆಗೆ ಒಳಪಡಿಸಿ ನ್ಯಾಯ ಒದಗಿಸಬೇಕೆಂಬ ಆಶಯ ಅವರಲ್ಲಿ ವ್ಯಕ್ತವಾಗಿದೆ. ರಮ್ಯ ವಿಮರ್ಶೆ ಬರೆದು ಕೃತಿಯ ಒಳಧ್ವನಿಯ ನೋವನ್ನು ಮರೆಮಾಚುವ ವಿಮರ್ಶಕರನ್ನು ಇಷ್ಟಪಡುವುದಿಲ್ಲ. ಪ್ರಾಚೀನ ಕಾಲದ ದಲಿತ ಶೋಷಣೆಯ ನೆಲೆಯಲ್ಲಿಯೇ ಸಾಹಿತ್ಯದಲ್ಲೂ ಹುಡುಕುವ ವಿಮರ್ಶೆ, ವಿಮರ್ಶಕ ಬರಬೇಕೆಂದು ಅವರು ಬಯಸುತ್ತಾರೆ.

### ೩.೩. ಜೋಗಿ : ಪರಂಪರೆಯ ಜತೆಗೆ ಅನುಸಂಧಾನ

ಜೋಗಿಯವರು ಪತ್ರಕರ್ತ. ಕಥೆಗಾರ, ವಿಮರ್ಶಕರಾಗಿ ಹೆಸರಾದವರು. ಇವರ 'ಜಾನಕಿ ಕಾಲಂ' ಕೃತಿಯ ಪ್ರಮುಖ ವಿಮರ್ಶಾ ಲೇಖನಗಳ ಮೂಲಕ ಪರಂಪರೆಯ ಬಗೆಗಿನ ದೃಷ್ಟಿಕೋನವೆನೆಂಬುದನ್ನು ಅರಿಯುವುದು ಮುಖ್ಯವಾಗಿದೆ.

ಜೋಗಿಯವರು ಹೇಳುವಂತೆ ಪಂಪನಿಂದ ಹಿಡಿದು ಚಂಪಾತನಕ ಯಾವ ಸಾಹಿತಿಯ ಮಕ್ಕಳೂ ಸಾಹಿತಿಗಳಾಗಿಲ್ಲ. ಆದರೆ ಸಾಹಿತ್ಯ ಪರಂಪರೆಯನ್ನು ಗಮನಿಸಿದರೆ ತಂದೆಯ ಕಾಯಕವನ್ನು ಮುಂದುವರೆಸಿರುವುದರ ಪೈಕಿ ನಮಗೆ ಸಿಗುವುದು ಇಬ್ಬರು. ಒಬ್ಬರು ಜಯಂತ ಕಾಯ್ಕಿಣಿ ಮತ್ತೊಬ್ಬರು ಪೂರ್ಣಚಂದ್ರ ತೇಜಸ್ವಿ. ಈ ಹಿರಿಯ ಲೇಖಕರ ಮೂಲಕ ಮಕ್ಕಳ

ಪ್ರತಿಭೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ವಂಶಪಾರಂಪರ್ಯವಾಗಿ ಕವಿಯ ಮಕ್ಕಳು ಸಾಹಿತಿಗಳಾಗುವುದಿಲ್ಲ. ನಿಜವಾದ ಪ್ರತಿಭೆಯಿದ್ದವರು ಮಾತ್ರ ಸಾಹಿತಿಗಳಾಗಲು ಸಾಧ್ಯ. ಜೋಗಿಯರವರು ಮಕ್ಕಳ ಮೂಲಕ ಹಿಂದಿನ ಪರಂಪರೆಯನ್ನು ಬೆಸೆಯುತ್ತಾರೆ. ಸೃಜನಶೀಲ ಮನಸುಳ್ಳ ವ್ಯಕ್ತಿ ಮಾತ್ರ ಸಾಹಿತಿಯಾಗಲು ಸಾಧ್ಯವಾಗುತ್ತದೆ ಎಂಬುದು ಅವರ ಅಭಿಪ್ರಾಯ. ಆದರೆ ಕೆಲವು ಸಾಹಿತಿಯ ಮಕ್ಕಳು ಸಾಹಿತ್ಯಕ್ಕೆ ತಾವೇ ವಂಶಪಾರಂಪರ್ಯ ಆಸ್ತಿ ಎಂಬಂತೆ ನಡೆದುಕೊಳ್ಳುತ್ತಾರೆ. ಉದಾ: ಬೆಂದ್ರೆಯವರ ಮಗ ವಾಮನ ಬೇಂದ್ರೆ, ಅವರು ಬೇಂದ್ರೆಯಾಗಲಿಲ್ಲ. ಇಂತಹ ಮನಸ್ಥಿತಿಯ ಸಾಹಿತಿಗಳನ್ನು ಬಯಸದೆ, ನಿಜವಾದ ಸೃಜನಶೀಲ ಮನಸ್ಸುಳ್ಳ ಸಾಹಿತಿಗಳನ್ನು ಜೋಗಿಯವರು ಬಯಸುತ್ತಾರೆ.

ಜೋಗಿಯವರು ಪರಂಪರೆಯ ನೆಲೆಯಲ್ಲಿ ಕವಿ ಮತ್ತು ಅವನ ಮಗನಿಗಿರುವ ಸಾಮ್ಯತೆ ಮತ್ತು ಬದ್ಧತೆಗಳನ್ನು ಗುರುತಿಸುವುದು ಮುಖ್ಯವಾಗಿದೆ. ಅಷ್ಟೇ ಅಲ್ಲದೇ ತೇಜಸ್ವಿಯವರು ಸಾಹಿತ್ಯಿಕವಾಗಿ ಸೃಷ್ಟಿಸಿರುವ ಕೃತಿಗಳೊಳಗಿನ ನಿಗೂಢ ಜಗತ್ತನ್ನು ಓದುಗರಿಗೂ ಮತ್ತು ಮುಂದಿನ ವಿಮರ್ಶಕರಿಗೂ ತೋರಿಸುವುದು ಅವರ ಆಶಯವಾಗಿದೆ. ತಂದೆಯ ಆದರ್ಶದ ಮಾತುಗಳನ್ನು ಮಗ ಪಾಲಿಸುವ ಮೂಲಕ ಹೊಸ ತಲೆಮಾರಿನ ಲೇಖಕರಿಗೆ ಆದರ್ಶ ಪ್ರಾಯರಾಗಿ ಕಾಣುವ ತೇಜಸ್ವಿ ಅವರಿಗೆ ಪ್ರೀತಿ ಪಾತ್ರರಾಗುತ್ತಾರೆ. ಪ್ರತಿಯೊಬ್ಬ ಲೇಖಕನು ತೇಜಸ್ವಿಯಂತೆ ನಿಗೂಢತೆಯನ್ನು ತಮ್ಮ ಬರವಣಿಗೆಯಲ್ಲಿ ತರಬೇಕು. ಹೀಗೆ ಒಬ್ಬ ಹಿರಿಯ ಲೇಖಕನ ವಿದ್ವತ್ತಿನ ಮೂಲಕ ಕಿರಿಯ ತಲೆಮಾರಿನ ಲೇಖಕರನ್ನು ಆ ದಿಕ್ಕಿನಡೆ ಸಾಗಿಸುವುದು ಜೋಗಿಯವರ ಮೂಲ ಉದ್ದೇಶವಾಗಿದೆ. ಇಂತಹ ನಿಗೂಢತೆಯನ್ನು ಬಳಸುವ ಲೇಖಕರು ಅವರಿಗೆ ಆಪ್ತರಾಗುತ್ತಾರೆ.

ತೇಜಸ್ವಿಯವರು ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲ, ಸಿದ್ಧಲಿಂಗ ಪಟ್ಟಣ ಶೆಟ್ಟಿ, ಕೆ.ವಿ.ತಿರುಮಲೇಶ್, ಸುಮತೀಂದ್ರ ನಾಡಿಗ, ನಿಸಾರ್ ಅಹಮದ್, ಅನಂತಮೂರ್ತಿ ಮುಂತಾದವರ ಸಮಕಾಲೀನವರಾಗಿದ್ದಾರೆ. ಕೆಲವರು ಇವರಿಗಿಂತ ಹಿರಿಯವರು ಇದ್ದಾರೆ. ಜೋಗಿಯವರು ಗುರುತಿಸಿದಂತೆ ಇವರೆಲ್ಲರಿಗಿಂತ ತೇಜಸ್ವಿ ಓದುಗರಿಗೆ ಆಪ್ತರಾಗುತ್ತಾರೆ. ಏಕೆಂದರೆ ಮೂಡಿಗೆರೆಯೆಂಬ ಸಣ್ಣ ಊರಿನಲ್ಲಿ ಅಧಿಕಾರ, ಪ್ರಶಸ್ತಿ, ರಾಜಕೀಯದ ಹಿಂದೆ ಬೀಳದೆ ತಮ್ಮ ಬದ್ಧತೆಯನ್ನು ತೇಜಸ್ವಿ ಕಾಪಾಡಿಕೊಂಡಿರುವುದು. ಆದರೆ ಕೆಲವರು ಅಧಿಕಾರ, ಪ್ರಶಸ್ತಿ ಪಡೆಯುವುದಕ್ಕಾಗಿ ರಾಜಕಾರಣಿಗಳ ಮನೆ ಬಾಗಿಲು ಕಾಯುವವರು ಇದ್ದಾರೆ. ಇಂತಹ ಲೇಖಕರನ್ನು ಜೋಗಿಯರು ನಿರಾಕರಿಸುತ್ತ ತೇಜಸ್ವಿಯವರಂತೆ ಆದರ್ಶಯುತರಾಗಿ ಬದುಕು ನಡೆಸುವ ಲೇಖಕರ ಬಗ್ಗೆ ಒಲವನ್ನು ಅವರು ವ್ಯಕ್ತಪಡಿಸಿದ್ದಾರೆ. ಇಂತಹ ಲೇಖಕರು, ಅವರಿಗೆ ಮಾದರಿಯಾಗಿ ಕಾಣುತ್ತಾರೆ.

ಜೋಗಿಯವರು ಹಿಂದಿನ ತಲೆಮಾರಿನ ಪತ್ರಕರ್ತರಿಗೂ, ಈ ತಲೆಮಾರಿನ ಪತ್ರಕರ್ತರಿಗೂ

ಇರುವ ವ್ಯತ್ಯಾಸವನ್ನು ಕುರಿತು ಚರ್ಚಿಸುತ್ತಾ, ಮುಂದಿನ ತಲೆಮಾರಿನ ಪತ್ರಕರ್ತರ ಬಗ್ಗೆ ಹೀಗೆ ಹೇಳುತ್ತಾರೆ. "ಹಿಂದಿನ ತಲೆಮಾರಿನ ಹಿರಿಯ ಪತ್ರಕರ್ತರಿಗೆ ವೈವಿಧ್ಯಮಯ ಆಸಕ್ತಿಗಳಿದ್ದವು. ಪತ್ರಿಕೋದ್ಯಮವೂ ಬದುಕೂ ಒಂದೇ ಆಗಿತ್ತು."[5] ಆದರೆ ಈಗಿನ ಪತ್ರಕರ್ತರಂತೆ ಪತ್ರಿಕೆಯನ್ನು ಮುಗಿಸಿದ ಕೂಡಲೇ ಮನೆಗೆ ಹೋಗುತ್ತಿರಲಿಲ್ಲ. ಹಿರಿಯ ಪತ್ರಕರ್ತರೊಂದಿಗೆ ಕಿರಿಯ ಪತ್ರಕರ್ತರು ಕೂತು ತಮ್ಮ ಸಂಪರ್ಕಕ್ಕೆ ಬರುವ ಪ್ರತಿಭಾವಂತರಾದ ರಾಜಕಾರಣಿ, ಸಾಹಿತಿ, ನಟ, ಸಾಮಾಜಿಕ ಸಮಸ್ಯೆಗಳು ಮುಂತಾದ ಹಲವಾರು ಸಂಗತಿಗಳನ್ನು ಚರ್ಚಿಸುತ್ತಿದ್ದರು. ಆ ಮೂಲಕ ಮನರಂಜನೆಯ ಮೂಲಕ ವಿಷಯದ ಸಂವಹನ ಕಾರ್ಯ ಈರ್ವರ ನಡುವೆ ನಡೆಯುತ್ತಿತ್ತು ಎನ್ನುತ್ತಾರೆ. ಪತ್ರಕರ್ತರಾದವರು ಯಾವಾಗಲೂ ಕ್ರಿಯಶೀಲರಾಗಿರಬೇಕು ಎಂದು ಜೋಗಿಯವರು ಯುವ ಪತ್ರಿಕಾ ಮಿತ್ರರಿಗೆ ಸಲಹೆ ನೀಡುತ್ತಾರೆ. ಅಂತಹ ಪತ್ರಕರ್ತರು ಮಾತ್ರ ನಮ್ಮ ನಡುವೆ ಒಂದು ಸಾಂಸ್ಕೃತಿಕ ಜಗತ್ತನ್ನು ಕಟ್ಟಲು ಸಾಧ್ಯವಾಗುತ್ತದೆ ಎಂದು ಅವರ ಅಭಿಪ್ರಾಯ.

ಹಿರಿಯ ಪತ್ರಕರ್ತರು ಯಾವಾಗಲೂ ಕ್ರಿಯಾಶೀಲರಾಗಿದ್ದು ವಿಶ್ವಕ್ಕೆ ತಮ್ಮನ್ನು ತೆರೆದುಕೊಂಡಿದ್ದರು ಎಂದು ವಿವರಿಸುತ್ತಾ ಜೋಗಿಯವರು "ಹಿಂದೆ ಹುಬ್ಬಳ್ಳಿಯ ವರದಿಗಾರರಲ್ಲಿ ರಾತ್ರಿ ಕೂತು ಬೇಂದ್ರೆ ಮತ್ತು ಶಂಬಾಜೋಶಿ ನಡುವಣ ಜಗಳದ ಬಗ್ಗೆ ಮಾತಾಡುತ್ತಿದ್ದರು. ವೈಯನ್ಕೆ, ಸದಾಶಿವ, ಟೀಯೆಸ್ಸಾರ್, ವೈಕುಂಠರಾಜು, ಶ್ರೀನಿವಾಸರಾವ್ ಮುಂತಾದವರೆಲ್ಲ ಒಟ್ಟಾಗಿ ರಾಮಾನುಜನ್ ಕಾವ್ಯದ ಬಗ್ಗೆ ಮಾತಾಡುತ್ತಿದ್ದರು. ಸಾಹಿತಿಗಳ ದೊಡ್ಡತನ ಸಣ್ಣತನಗಳೆಲ್ಲ ಮಾತಲ್ಲಿ ಬಂದು ಹೋಗುತ್ತಿದ್ದವು. ರಾಮಚಂದ್ರ ಶರ್ಮ ಕ್ರಿಸ್ತಪೂರ್ವ ಛರ್ಮ ಎಂದಿದ್ದೂ, ಪು.ತಿ.ನ ಅಂದರೆ ಪುಟ ತಿರುಗಿಸಿ ನಡಿ ಅಂದಿದ್ದು ಸುದ್ದಿಯಾಗುತ್ತಿತ್ತು"[6] ಎಂದು ಹೇಳುತ್ತಾರೆ. ಹೀಗೆ ಜೋಗಿಯವರು ಪರ್ತಕರ್ತನಾದವನು ಸುಮ್ಮನೆ ಕೂರಬಾರದು ಯಾವಾಗಲೂ ಸಮಾಜ ಮುಖಿಯಾಗಿ ತೆರೆದುಕೊಳ್ಳಬೇಕು ಎನ್ನುತ್ತಾರೆ. ಒಂದು ತಲೆಮಾರಿನ ಆದರ್ಶ ಮೌಲ್ಯಗಳು, ನೈತಿಕತೆ, ಬದ್ಧತೆ, ಮುಂದಿನ ತಲೆಮಾರು ಅನುಸರಿಸುವ ಮೂಲಕ ಬೆಳೆಯಬೇಕು ಎಂದು ಅವರು ಹೇಳುತ್ತಾರೆ. ಅಂತಹ ಪತ್ರಕರ್ತರು ಎರಡು ತಲೆಮಾರಿನ ಕೊಂಡಿಯನ್ನು ಇನ್ನೂ ಗಟ್ಟಿಯಾಗಿಸಲು ಸಾಧ್ಯ ಅಂತಹ ಪತ್ರಕರ್ತರು ನಮಗೆ ಬೇಕೇ ಹೊರತು ಸೋಮಾರಿಗಳಲ್ಲವೆಂಬುದು ಜೋಗಿಯರ ನಿಲುವಾಗಿದೆ.

ವೈ.ಎನ್.ಕೆ.ಯವರು ಲಾಸ್ಟ್ ವಂಡರ್ ಎಂದು ಹೇಳುವ ಜೋಗಿಯವರು, ಅನೇಕ ಅವರ ತಲೆಮಾರಿನ ಹಾಗೂ ಹಿರಿಯ ತಲೆಮಾರಿನ ಕವಿಗಳನ್ನು ಇಟ್ಟುಕೊಂಡು ವೈ.ಎನ್.ಕೆ ಅವರನ್ನು ಒಬ್ಬ ಶ್ರೇಷ್ಠ ವ್ಯಕ್ತಿಯಾಗಿ ಚಿತ್ರಿಸಿದ್ದಾರೆ. ಬಿ.ವಿ.ಕಾರಂತರು, ಜಿ.ವಿ.ಅಯ್ಯರ್, ಗಿರೀಶ್ ಕಾರ್ನಾಡ್, ಲಂಕೇಶ್, ವಾಸುದೇವ್, ನಿಸಾರ್ ಅಹಮದ್ ಇಂತಹ ಹಲವಾರು ಬರಹಗಾರರನ್ನು ವೈ.ಎನ್.ಕೆ. ಬೆಳೆಸಿದರು. ಇಂತಹ ಮನೋಭಾವವುಳ್ಳ ವ್ಯಕ್ತಿಗಳು ಜೋಗಿಯವರಿಗೆ ಆದರ್ಶದಂತೆ

ಕಾಣುತ್ತಾರೆ. ಈ ರೀತಿಯಾಗಿ ಹೊಸಬರನ್ನು ಬೆಳೆಸುವ ಬಹುತೇಕ ಲೇಖಕರು, ವಿಮರ್ಶಕರು ನಮ್ಮ ನಡುವೆ ಬೆರಳೆಣಿಕೆ ಮಂದಿ ಇದ್ದಾರೆ. ಇಂತಹ ಮನಸ್ಥಿತಿಯನ್ನೇ ಈಗಿನ ಬರಹಗಾರರು ಬೆಳಸಿಕೊಳ್ಳಬೇಕು ಎಂದು ಜೋಗಿಯವರು ಸೂಚಿಸುತ್ತಾರೆ.

### ೩.೪. ತಾರಿಣಿ ಶುಭದಾಯಿನಿ.ಆರ್ : ಪರಂಪರೆ ಜತೆಗೆ ಅನುಸಂಧಾನ

ಹೊಸ ತಲೆಮಾರಿನ ಪ್ರಮುಖ ವಿಮರ್ಶಕಿಯಾದ ತಾರಿಣಿ ಶುಭದಾಯಿನಿಯವರು ಹೊಸ ಭರವಸೆಯನ್ನು ಮೂಡಿಸಿದ ವಿಮರ್ಶಾ ಲೋಕದ ಸ್ತ್ರೀದನಿ ಆಗಿದ್ದಾರೆ. 'ಹೆಡೆಯಂತಾಡುವ ಸೊಡರು' ಇತ್ತೀಚಿನ ವಿಮರ್ಶಾ ಕೃತಿಯಾಗಿದೆ. ತಾರಿಣಿ ಕೃತಿ ವಿಮರ್ಶೆ, ಸೈದ್ಧಾಂತಿಕ ವಿಮರ್ಶೆ, ಸಂಸ್ಕೃತಿ ವಿಮರ್ಶೆ, ಹೀಗೆ ಹಲವು ಕವಲುಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

ಮಹಿಳಾ ಕಾವ್ಯವನ್ನು ಅಭ್ಯಾಸ ಮಾಡುವಾಗ ಪರಂಪರೆಯನ್ನು ಗುರುತಿಸುವುದು ಪಂಪ, ರನ್ನ, ಕುಮಾರವ್ಯಾಸ, ಕುವೆಂಪು ಸಾಲಿನಲ್ಲಿ ಅಲ್ಲ. ಬದಲಾಗಿ ಅಕ್ಕಮಹಾದೇವಿ, ಸಂಚಿಹೊನ್ನಮ್ಮರ ಸಾಲಿನಲ್ಲಿ ಗುರುತಿಸಲಾಗುತ್ತದೆ ಎಂದು ಹೇಳುವ ತಾರಿಣಿಯವರು, ಪುರುಷ ವ್ಯವಸ್ಥೆಯ ಮೂಲಕ ಸ್ತ್ರೀಯನ್ನು ಗುರುತಿಸುವ ಕ್ರಮವನ್ನು ಟೀಕಿಸುತ್ತಾರೆ. ಹಿಂದಿನ ಪ್ರತಿಭಾವಂತ ಸ್ತ್ರೀಯರ ಮೂಲಕ ಇಂದಿನ ಬರಹಗಾರ್ತಿಯರನ್ನು ಅವರ ಕಾವ್ಯವನ್ನು ಗುರುತಿಸಬೇಕೆಂಬುದು ಅವರ ನಿಲುವಾಗಿದೆ. ಆ ಮೂಲಕ ಮಹಿಳಾ ಕಾವ್ಯವನ್ನು ಪರಂಪರೆಯ ಜತೆಗೆ ಅನುಸಂಧಾನಿಸಿ ಬೆಳೆಸಬೇಕೆಂಬ ನಿಲುವು ಅವರಲ್ಲಿ ಇರುವುದು ಕಾಣುತ್ತದೆ.

ತಾರಿಣಿಯವರು ಪುರುಷ ವಿಮರ್ಶಕರು ಏನೇ ಬರೆದರೂ ಅವರನ್ನು ಹಿರಿಯ ಲೇಖಕರಿಗೆ ಹೋಲಿಸುವುದಿಲ್ಲ. ಆದರೆ ಹೊಸದಾಗಿ ಬರೆಯುವ ಸ್ತ್ರೀ ಬರಹಗಾರರನ್ನು ಅಕ್ಕ ಮಹಾದೇವಿಗೆ ಹೋಲಿಸುತ್ತಿರುವ ಕ್ರಮವನ್ನು ವಿರೋಧಿಸುತ್ತಾರೆ. "ಲೇಖಕಿಯರ ಮುಂದೆ ವಿಮರ್ಶಕ ಸಮುದಾಯ ಪೇರಿಸಿ ಬಿಡುವ ಇನ್ನೊಂದು ದೊಡ್ಡ ಗೋಡೆ ಅಕ್ಕಮಹಾದೇವಿ. ಕುವೆಂಪು, ಬೇಂದ್ರೆ, ಅಡಿಗರನ್ನು ಯಾರು ಅಲ್ಲಮ ಪ್ರಭುಗಳಿಗೆ ಹೋಲಿಸುವುದಿಲ್ಲ. ಆದರೆ ಇತ್ತೀಚೆಗೆ ಬರೆಯಲು ಪ್ರಾರಂಭಿಸಿದ ಪುಟ್ಟ ಹುಡುಗಿಯ ಕವನವನ್ನು ಅಕ್ಕಮಹಾದೇವಿಗೆ ಹೋಲಿಸಿ ಬಿಡುತ್ತಾರೆ. ಈ ಅಕ್ಕಯೆಂಬ ಸಿಂಡ್ರೋಂನಿಂದ ಪಾರಾಗದೆ ಬೇರೆ ದಾರಿಯಿಲ್ಲ"[೮] ಸ್ತ್ರೀಯ ಬಗ್ಗೆ ವಿಮರ್ಶೆ ಮಾಡುವವರು ಎಂತಹ ಯುವ ಕವಯತ್ರಿಯರನ್ನು ಅಕ್ಕಮಹಾದೇವಿಗೆ ಹೋಲಿಸುವ ಕ್ರಮ ನಮ್ಮ ನಡುವೆ ಬೆಳೆದು ಬಂದಿರುವ ಕ್ರಮವನ್ನು ಅವರು ಗುರುತಿಸುತ್ತಾರೆ. ಹೊಸದಾಗಿ ಕವಿತೆಯನ್ನು ಬರೆಯುವ ಕವಿಗಳನ್ನು ನಮ್ಮ ಹಿಂದಿನ ಕವಿಗಳಿಗೆ ಹೋಲಿಸುವುದಿಲ್ಲ. ಅಕ್ಕಮಹಾದೇವಿಯ ಚಿಂತನೆಗಳಿಂದ, ಸ್ತ್ರೀ ಸಂವೇದಗಳಿಂದ ಹೊರಬಂದು ಕವಿತ ಬರೆಯಲು ಸಾಧ್ಯವಿಲ್ಲ. ಒಂದಲ್ಲ ಒಂದು ಅಂಶದಿಂದ ಆಕೆ ನಮ್ಮೊಳಗೆ ಇದ್ದಾಳೆ. ಅಕ್ಕನೆಂಬ ಸಿಂಡ್ರೋಂನಿಂದ

ಹೊರಬರಲು ಸಾಧ್ಯವಿಲ್ಲವೆಂಬ ಭಾವವು ಅವರಲ್ಲಿ ವ್ಯಕ್ತವಾಗಿದೆ.

ಅಕ್ಕ ಮಹಾದೇವಿಯೆಂಬ ಪರಂಪರೆಯ ಕೊಂಡಿಯಿಂದ ಹೊರಬಂದು ಯುವ ಕವಯತ್ರಿಯರು ಕವಿತೆ ರಚಿಸಲು ಸಾಧ್ಯವಿಲ್ಲ. ಅವಳ ಸ್ತ್ರೀಪರ ಚಿಂತನೆಗಳು ಹೊಸ ತಲೆಮಾರಿನ ಬರಹಗಾರ್ತಿಯರಲ್ಲೂ ಪ್ರವಹಿಸುತ್ತಿರುತ್ತವೆ. ಆದ್ದರಿಂದ ಅಕ್ಕ ಮುಂದಿನ ತಲೆಮಾರಿನ ಬರಹಗಾರ್ತಿಯವರಿಗೆ ಒಂದು ಮಾದರಿಯಾಗಿದ್ದಾಳೆ ಎಂದು ಪ್ರತಿಭಾರ ಕಾವ್ಯಕ್ಕೆ ಸಮರ್ಥನೆಯನ್ನು ಅವರು ನೀಡುತ್ತಾರೆ. ಆದರೆ ಪುರುಷರು ಅಕ್ಕನಂತೆ ಗುರುತಿಸಿಕೊಳ್ಳಲಾರರು ಎಂಬುದು ತಾತ್ಪರ್ಯ. ಹಿಂದಿನ ತಲೆಮಾರಿನ ಮೂಲಕ ಗುರುತಿಸಿಕೊಳ್ಳಲು ಬರಹಗಾರರ ಸಂದರ್ಭದಲ್ಲಿ ಇತ್ತೀಚಿನ ಯುವ ಕವಿತೆಗಳ ಮೂಲಕ ಹಿರಿಯ ವಚನಕಾರ್ತಿಯರನ್ನು ನೋಡುವ ಕ್ರಮ ವಿಶಿಷ್ಟವಾಗಿದೆ ಎಂಬ ಆಶಯ ಅವರಲ್ಲಿದೆ.

ತಾರಿಣಿಯವರು ಲಿಖಿತ ರೂಪದಲ್ಲಿ ಸಿಗುವ ಅಭಿವ್ಯಕ್ತಿಗಳಿಗಿಂತ ದೇಶೀ ನೆಲೆಗಳಲ್ಲಿರುವ ಸ್ತ್ರೀ ಅಭಿವ್ಯಕ್ತಿಯ ರಚನೆಗಳು ಭಿನ್ನವಾಗಿರುತ್ತವೆ ಎನ್ನುತ್ತಾರೆ. ಲಿಖಿತ ರೂಪದಲ್ಲಿ ವ್ಯಕ್ತವಾಗುವ ಸ್ತ್ರೀ ಸಂವೇದನೆಗಳು ಕೃತಕವಾಗಿ ಅವರಿಗೆ ಕಂಡರೆ, ಅದೇ ದೇಸಿ ನೆಲೆಯಲ್ಲಿ ಮೌಖಿಕ ಪರಂಪರೆಯಲ್ಲಿ ಹಿಂದಿನ ತಲೆಮಾರಿನವರ ಸ್ತ್ರೀ ಸಂವೇದನೆಗಳು ಜೀವಂತಿಕೆಯಿಂದ ಹಾಡಾಗಿ ಹೊರಬರುತ್ತಿದ್ದವು. ಅಂತಹ ದೇಸಿಯ ನೆಲೆಯಲ್ಲಿ ನಿರ್ದಿಷ್ಟ ಪರಂಪರೆಯನ್ನು ಕ್ರಿಯಾಶೀಲವಾಗಿ ಮಹಿಳಾ ಕಾವ್ಯ ಕಟ್ಟುತ್ತಿದೆ ಎಂದು ಅವರು ತಿಳಿಸುವರು. ಅಂತಹ ದೇಸಿಯ ಬರಹಗಾರ್ತಿಯರ ಅಭಿವ್ಯಕ್ತಿಯ ಕ್ರಮ ತಾರಿಣಿಯವರಿಗೆ ಆಪ್ತವಾಗುತ್ತದೆ. ಹಿಂದಿನ ತಲೆಮಾರಿನ ದೇಸಿಯ ಬರಹಗಾರ್ತಿಯರಂತೆ ಇಂದಿನ ಸ್ತ್ರೀವಾದಿ ಲೇಖಕಿಯರು ಜೀವ ತುಂಬುವುದು ಆರೋಗ್ಯಕರ ಬೆಳವಣಿಗೆ ಎಂಬುದು ಅವರ ಅಭಿಪ್ರಾಯವಾಗಿದೆ.

"ಅಪ್ಪಯೆಂಬ ಸಿಂಡ್ರೋಂನಿಂದ ಹೊರಬರಬೇಕೆನ್ನುವ ಆಶಯಗಳನ್ನು ಕನ್ನಡದ ಕವಿಗಳಲ್ಲಿ ನೋಡಿದರೆ, ಅಮ್ಮಯೆಂಬ ಸಿಂಡ್ರೋಂನಿಂದ ಬಿಡುಗಡೆಯಾಗಲು ನಮ್ಮ ಕವಯತ್ರಿಯರು ನೋಡುತ್ತಾರೆ" ಎಂದು ತಾರಿಣಿ ಅವರು ಹೇಳುತ್ತಾರೆ. ತಂದೆಯ ಹಿಡಿತದಿಂದ ಮಗ, ತಾಯಿಯ, ಹಿಡಿತದಿಂದ ಮಗಳು ಹೊರಬರುವ ಕ್ರಿಯೆಯನ್ನು ಮೇಲಿನ ಹೇಳಿಕೆ ಪ್ರತಿನಿಧಿಸುತ್ತದೆ. ತಂದೆಯ ಪರಂಪರೆ, ತಾಯಿಯ ಪರಂಪರೆಯ ಕೊಂಡಿಯಿಂದ ನುಣುಚಿಕೊಳ್ಳುವ ಹೊತ್ತಲ್ಲಿ ಪ್ರತಿಭಾರ ಕವಿತೆ ಅದೇ ಪರಂಪರೆಯೊಂದಿಗೆ ಗುರುತಿಸಿಕೊಳ್ಳಲು ಬಯಸುತ್ತದೆ. ಬಂಡಾಯದ ಪರಂಪರೆ ಎದುರಿಸುವ ನಿಟ್ಟಿನಲ್ಲಿ ಅಮ್ಮ ಅಜ್ಜಿಯರಲ್ಲಿ ಇರುವ ಬಂಡಾಯದ ಕಾವೊಂದನ್ನು ಗುರುತಿಸುವ ಕ್ರಿಯೆಯು ತಾರಿಣಿ ಅವರಿಗೆ ಆಪ್ತವಾಗುತ್ತದೆ. ಪರಂಪರೆಯ ಆಚೆ ಹೋಗಿ ಗುರುತಿಸಿಕೊಳ್ಳುವುದಕ್ಕಿಂತ, ಪರಂಪರೆಯೊಳಗೆ ನಿಂತು ಆ ಮೂಲಕ ಗುರುತಿಸಿಕೊಳ್ಳುವ ಸ್ತ್ರೀವಾದಿಗಳು

ಅವರಿಗೆ ಮುಖ್ಯವಾಗುತ್ತಾರೆ.

ಪ್ರತಿಭಾ ನಂದಕುಮಾರ್, ಮಲ್ಲಿಕಾ ಘಂಟಿ, ಶಶಿಕಲಾ ವೀರಯ್ಯಸ್ವಾಮಿ, ಗೀತಾ ನಾಗಭೂಷಣ, ವೀಣಾಶಾಂತೇಶ್ವರ, ವೈದೇಹಿ ಮುಂತಾದ ಇವರ ಸಾಹಿತ್ಯದ ಮೂಲಕ ಪ್ರತಿಭಟನೆಯ ನೆಲೆಗಳನ್ನು ತಾರಿಣಿಯವರು ಗುರುತಿಸುತ್ತಾರೆ. ಪುರಾಣ ಪಾತ್ರಗಳು, ಲೈಂಗಿಕತೆ, ಅಡುಗೆಮನೆ ಹೀಗೆ ಬೇರೆ ಬೇರೆ ಸಂಕೇತಗಳನ್ನು ಬಳಸಿಕೊಳ್ಳುತ್ತಾ ಅವನ್ನು ಹೊಡೆಯುವ ಮೂಲಕ ಸ್ತ್ರೀಯ ಸಂವೇದನೆಗಳನ್ನು ಅವರು ಅಭಿವ್ಯಕ್ತಪಡಿಸಿರುವುದು ಕಾಣುತ್ತದೆ. ನಮ್ಮ ಪರಂಪರೆಯು ಹೇರಿರುವ ಪುರಾಣದ ಪ್ರಜ್ಞೆಯನ್ನು ಭಂಜಿಸುವ, ಪುನರ್ ಕ್ರಿಯೆಗೆ ಒಳಪಡಿಸುವ ಮೂಲಕ ಯುವ ತಲೆಮಾರಿನ ಲೇಖಕಿಯರಿಗೆ ಮಾದರಿ ಎಂದು ಅವರು ತಿಳಿಸುವರು. ಒಂದು ಚೌಕಟ್ಟಿಗೆ ಒಳಪಡದೆ ಹೊಸ ನೆಲೆಯಲ್ಲಿ ತಮ್ಮ ಸಂವೇದನೆಯನ್ನು ವ್ಯಕ್ತಪಡಿಸುವ ಬರಹಗಾರ್ತಿಯರು ತಾರಿಣಿಯವರಿಗೆ ಸಾಂಸ್ಕೃತಿಕವಾಗಿ ಮುಖ್ಯವೆನಿಸುತ್ತಾರೆ.

ತಾರಿಣಿಯವರು ಇಂಗ್ಲಿಷ್ ಅಧ್ಯಾಪಕರಾಗಿರುವುದರಿಂದ ಅವರು ವಿಮರ್ಶೆಯಲ್ಲಿ ಪಶ್ಚಿಮದ ಲೇಖಕರ ಹೆಚ್ಚು ಉಲ್ಲೇಖಗಳು ಕಂಡು ಬರುತ್ತವೆ. ಉದಾ: ಸವಿತಾರವರ ಪದ್ಯದ ಲಯದ ವಿನ್ಯಾಸಕ್ಕೆ ಝೆನ್ ಹಾಗೂ ಹಾಯ್ಕು ಪದ್ಯಗಳನ್ನು ಅವರು ತೌಲನಿಕವಾಗಿ ತಂದು ನಿಲ್ಲಿಸುತ್ತಾರೆ. ಇವಕ್ಕೆ ಹೋಲಿಸಿದರೆ ತಾರಿಣಿ ವಿಮರ್ಶೆಯಲ್ಲಿ ಆಧುನಿಕ ಪೂರ್ವಕನ್ನಡ ಸಾಹಿತ್ಯದ ಉಲ್ಲೇಖಗಳು ಕಡಿಮೆ. ಆಧುನಿಕ ಪೂರ್ವ ಕನ್ನಡ ಸಾಹಿತ್ಯದ ಹಂಗಿಲ್ಲದೆ ಸಾಹಿತ್ಯ ವಿಮರ್ಶೆ ಬರೆಯಬಹುದು. ಆದರೂ ಅಲ್ಲಿ ಎಂತಹುದೋ ಒಂದು ಕೊರತೆ ಉಳಿದುಬಿಡುತ್ತದೆ. ಆಧುನಿಕ ಸಾಹಿತ್ಯಕ್ಕೆ ಸೀಮಿತಗೊಳಿಸಿಕೊಂಡಂತಿರುವ ಕೆಲವು ವಿಮರ್ಶಕರಲ್ಲಿ ಇದನ್ನು ಕಾಣಬಹುದು. ಆದರೆ ಸಮಕಾಲೀನವಾದ ಒಂದು ಕೃತಿಯ ಬಗ್ಗೆ ಮಾತಾಡುವಾಗಲೂ ಪರೋಕ್ಷವಾಗಿ ಒಟ್ಟು ಕನ್ನಡ ಸಾಹಿತ್ಯ ಪರಂಪರೆಯ ಕುರಿತು ನೋಟಗಳನ್ನು ಕೊಡಬಲ್ಲ ಜಿ.ಎಸ್.ಆಮೂರ, ಕುರ್ತಕೋಟಿ, ಚೆನ್ನಿ, ಸಿ.ಎನ್.ಆರ್. ಅವರಲ್ಲಿ ಈ ಸಮಸ್ಯೆ ಕಾಣುವುದಿಲ್ಲ.

**೩.೫. ಜಿ.ಬಿ.ಹರೀಶ್ : ಪರಂಪರೆ ಜತೆಗೆ ಅನುಸಂಧಾನ**

ಹರೀಶ್‌ರವರ 'ಬೆಳಕಿನಾಟ' ವಿಮರ್ಶಾಕೃತಿ, ಹೊಸಗನ್ನಡದ ನಿರ್ಲಕ್ಷಿತ ನೆಲೆಗಳನ್ನು ಹುಡುಕುವ ಒಂಬತ್ತು ಲೇಖನಗಳ ಸಂಗ್ರಹವಾಗಿದೆ.

ಒಂದು ಕಾಲ ಘಟ್ಟದಲ್ಲಿ ಸಾಹಿತ್ಯ ಚರಿತ್ರೆಯನ್ನು ನಿರ್ಮಿಸಿ ಅದನ್ನು ಅಲ್ಲಿಗೆ ಬಿಟ್ಟಿರುವ ಕ್ರಮವನ್ನು ಹರೀಶ್‌ರವರು ಗುರುತಿಸುತ್ತಾರೆ. ಇಂದಿನ ಅಥವಾ ಆಯಾ ಕಾಲದ ವಿಮರ್ಶಕರು ಸಂಶೋಧಕರು ಹಾಗೂ ಸಾಹಿತ್ಯ ಚರಿತ್ರಕಾರರು ಆ ಖಾಲಿ ಜಾಗಗಳನ್ನು ತಮ್ಮ ಚಿಂತನೆಗಳ ಮೂಲಕ ಸಾಹಿತ್ಯಕ್ಕೆ ಸಾಹಿತ್ಯ ಚರಿತ್ರೆಯ ಆಕೃತಿ ನೀಡಲು ಹವಣಿಸುತ್ತಿರುವುದನ್ನು ಅವರು

ಸ್ವಾಗತಿಸುತ್ತಾರೆ. ಅಷ್ಟೇ ಅಲ್ಲ ಅಂತಹ ವಿಮರ್ಶಕರು ಹಾಗೂ ಸಂಶೋಧಕರು ಹಿಂದಿನವರು ಹಾಕಿಕೊಟ್ಟ ಚರಿತ್ರೆಯನ್ನು ಮುಂದುವರಿಸುತ್ತಾ ಸಾಹಿತ್ಯಿಕವಾಗಿ ಒಗ್ಗೂಡಿಸುತ್ತಿರುವ ಕ್ರಮವನ್ನು ಅವರು ಒಪ್ಪುತ್ತಾರೆ. ಹಿಂದಿನ ತಲೆಮಾರಿನವರು ಕಟ್ಟಿಕೊಟ್ಟಿರುವ ಸಾಂಸ್ಕೃತಿಕ ಪರಂಪರೆಯನ್ನು ಹಾಗೂ ಸಾಹಿತ್ಯಿಕ ಸಮಸ್ಯೆಗಳನ್ನು ಅರಿತು ವಿಮರ್ಶೆ ಮಾಡುವ ವಿಮರ್ಶಕರು, ಸಂಶೋಧಕರು ಅವರಿಗೆ ಆಪ್ತರಾಗುತ್ತಾರೆ.

ಜಿ.ಬಿ.ಹರೀಶ್‌ರವರು ಕುವೆಂಪು ವಿಚಾರ ಸಾಹಿತ್ಯದ ವಿಮರ್ಶಾತ್ಮಕ ಅಧ್ಯಯನಕ್ಕೂ ಆ ಕಾಲದ ಇನ್ನಿತರ ಸಾಹಿತಿಗಳ ವಿವಿಧ ಐಡಿಯಾಲಜಿಗಳ ಕ್ರಮವನ್ನು ಸಾಂಸ್ಕೃತಿಕ ನೆಲೆಯಲ್ಲಿ ಗುರುತಿಸುತ್ತಾರೆ. ಕುವೆಂಪು, ಬೇಂದ್ರೆ, ದೇವುಡು, ಶಿವರಾಮ ಕಾರಂತ, ಶ್ರೀರಂಗ, ಮಾಸ್ತಿ ಇವರೆಲ್ಲರೂ ಮೇಲ್ನೋಟಕ್ಕೆ ಒಂದೇ ಅಖಂಡ ಸಂಸ್ಕೃತಿಯಿಂದ ಬಂದವರೆಂದು ಕಂಡರೂ ಎಲ್ಲರಲ್ಲೂ ಒಂದು ರೀತಿಯಲ್ಲಿ ಭಿನ್ನತೆಗಳಿವೆ ಎಂಬುದನ್ನು ಅವರು ಹೇಳುತ್ತಾರೆ. ಬೇಂದ್ರೆಯವರ ದಟ್ಟ ಬಡತನದ ಅನುಭವ, ದೇವುಡು ಅವರ ಸಾಮಾಜಿಕ ಕಾಳಜಿ, ಮಾಸ್ತಿಯವರಲ್ಲಿ ಪ್ರಾಚೀನ ಸಂಸ್ಕೃತಿಯ ಸತ್ವಹಿರಬೇಕೆಂಬ ಕಳಕಳಿ– ಹೀಗೆ ಭಿನ್ನವಾದ ನೆಲೆಗಳಲ್ಲಿ ಹಿರಿಯ ಕವಿಗಳಿದ್ದಾರೆಂಬುದನ್ನು ಅವರು ತಿಳಿಸುವರು. ಪ್ರತಿಯೊಬ್ಬ ಕವಿಗಳು ತಮ್ಮದೇ ಆದ ದೃಷ್ಟಿಕೋನದಲ್ಲಿ ಸಾಹಿತ್ಯ ಕೃಷಿಯನ್ನು ಮಾಡುತ್ತಿದ್ದಾರೆ. ಅಂತಹ ವಿಶಿಷ್ಟತೆಯನ್ನು ವಿಮರ್ಶಕರು ಅರಿತು ವಿಮರ್ಶೆಯಲ್ಲಿ ತೊಡಗಬೇಕೆಂಬ ಕಾಳಜಿಯು ಅವರಲ್ಲಿ ವ್ಯಕ್ತವಾಗುತ್ತದೆ. ಈ ರೀತಿಯ ಕವಿಗಳಲ್ಲಿನ ಭಿನ್ನತೆಗಳನ್ನು ಪತ್ತೆ ಹಚ್ಚುವ ಜವಾಬ್ದಾರಿ ವಿಮರ್ಶಕನ ಮುಂದೆ ಅಂತಹ ವಿಮರ್ಶಕರು ಹರೀಶ್ ಅವರ ದೃಷ್ಟಿಯಲ್ಲಿ ಮುಖ್ಯವಾಗುತ್ತಾರೆ.

ಕುವೆಂಪು ಸೇರಿದಂತೆ ೨೦ನೇ ಶತಮಾನದ ಮೊದಲ ಮತ್ತು ಎರಡನೆಯ ಪೀಳಿಗೆಯ ಬರಹಗಾರರ ಪೂರ್ವ–ಪಶ್ಚಿಮದ ನಡುವಿನ ತಿಕ್ಕಾಟಕ್ಕೆ ಸಾಕ್ಷಿಯಾಗಿದ್ದರು ಎಂಬುದಾಗಿ ಹರೀಶ ಹೇಳುತ್ತಾರೆ. ಕುವೆಂಪು ವಿಮರ್ಶೆಯ ಬರವಣಿಗೆಯ ಮೇಲೆ ಶ್ರೀ. ರಾಮಕೃಷ್ಣ ಪರಮಹಂಸ, ಶ್ರೀ. ಅರವಿಂದರು, ಗಾಂಧೀಜಿ, ವಿನೋಬಾ ಮುಂತಾದವರ ಪ್ರೇರಣೆ ಪ್ರಭಾವಗಳಿರುವುದನ್ನು ಗುರುತಿಸಬಹುದಾಗಿದೆ ಎಂದು ಅವರು ತಿಳಿಸುತ್ತಾರೆ. ಹೀಗೆ ಪ್ರತಿಯೊಬ್ಬ ಕವಿಯ ಸಾಹಿತ್ಯದ ರಚನೆಯ ಹಿಂದೆ ತಮ್ಮ ಹಿಂದಿನ ಪರಂಪರೆಯ ಮಹನೀಯರು, ಸಮಕಾಲೀನರು ಕೊಡುಕೊಳ್ಳುವಿಕೆ ಇರುತ್ತದೆಂದು ಅವರು ಹೇಳುತ್ತಾರೆ. ಕುವೆಂಪು ಅವರು ಅಜ್ಜಿ ಬಳಸುತ್ತಿದ್ದ ಆಭರಣವನ್ನು ಮೊಮ್ಮಗಳು ಮುರಿಸಿ ತನಗೆ ಬೇಕಾದ ನವೀನ ರೀತಿಯಲ್ಲಿ ಆಭರಣ ಮಾಡಿಸಿಕೊಂಡು ಉಪಯೋಗಿಸಿ ಎಂದು ಹೇಳುವುದನ್ನು ಉಲ್ಲೇಖಿಸುತ್ತ ಕಾಲ ದೇಶಕ್ಕೆ ಅನುಗುಣವಾಗಿ ಸಾಹಿತ್ಯವನ್ನು ಪುನರ್ ವಿಮರ್ಶೆಗೆ ಒಳಪಡಿಸಬೇಕೆಂದು ಅವರು ಹೇಳುತ್ತಾರೆ. ಇಂತಹ ಕುವೆಂಪುರವರನ್ನು ವಿಶ್ವ ತತ್ವದ ನೆಲೆಯಲ್ಲಿ ಗುರುತಿಸಿರುವುದಲ್ಲದೆ ಮುಂದಿನ ವಿಮರ್ಶಕರಿಗೆ

ಮಾದರಿಯೆಂದು ಹರೀಶ್ ಹೇಳುತ್ತಾರೆ.

ಕನ್ನಡ ನವೋದಯದ ಹಿರಿಯ ಕವಿಗಳನ್ನು ಕೀಟ್ಸ್, ಶೆಲ್ಲಿ, ವರ್ಡ್ಸ್‌ವರ್ತರಿಗೆ ಹೋಲಿಸುವ ಹಾಗೂ ನವೋಯಯವನ್ನು 'ರೋಮ್ಯಾಂಟಿಸಿಸಂ' ಎಂದು ಕೀಳು ಅರ್ಥದಲ್ಲಿ ವಿಮರ್ಶಕರು ನವ್ಯ ಸಾಹಿತಿಗಳು ನಿರ್ವಚಿಸಿರುವ ಕ್ರಮವನ್ನು ಹರೀಶ್ ಅವರು ಅಲ್ಲಗಳೆಯುತ್ತಾರೆ. ಕುವೆಂಪು ರವರು ಕನ್ನಡ ಮತ್ತು ಕರ್ನಾಟಕವನ್ನು ಭಾಷೆ, ಭೂಗೋಳವಾಗಿ ನೋಡದೆ ವಿಸ್ತೃತ ನೆಲೆಯಲ್ಲಿ ಭಾವನಾತ್ಮಕವಾಗಿ ನೋಡಿದ ಕವಿಯೆಂದು ಅವರು ಹೇಳುತ್ತಾರೆ. ಇಂತಹ ಅನೇಕ ಹಿರಿಯ ಕವಿಗಳನ್ನು ಒಂದು ಸೀಮಿತ ಚೌಕಟ್ಟಿಗೆ ಅಳವಡಿಸಿ ನೋಡುತ್ತಿರುವ ನಮ್ಮ ಇದುವರೆಗಿನ ಪರಂಪರೆಯನ್ನು ಅವರು ಒಪ್ಪುವುದಿಲ್ಲ. ಮುಂದಿನ ತಲೆಮಾರಿನ ವಿಮರ್ಶಕರು ಹಿರಿಯ ಕವಿಗಳನ್ನು ಅವರ ಸಾಹಿತ್ಯವನ್ನು ವಿಸ್ತೃತ ನೆಲೆಯಲ್ಲಿ ಪುನರ್ ವಿಮರ್ಶಿಸಿ ಕೊಡುಕೊಳೆ ನಡೆಸಬೇಕೆಂಬ ಆಶಯ ಅವರಲ್ಲಿ ಪ್ರಕಟವಾಗಿರುವುದನ್ನು ಗಮನಿಸಬಹುದಾಗಿದೆ.

ಹಿಂದಿನ ಕವಿಗಳು ಕೃತಿಯನ್ನು ರಚಿಸುವ ಮುನ್ನ ತಮ್ಮ ಹಿಂದಿನ ಕವಿಗಳನ್ನು ನೆನೆಯುವ ಕ್ರಮ ಬಹಳ ಹಳೆಯ ಕ್ರಮವಾಗಿದೆ ಎಂದು ಹರೀಶ್ ಹೇಳುತ್ತಾರೆ. ಹಾಗೆಯೇ ಕುವೆಂಪುರವರು ತಮ್ಮ ಮಹಾಕಾವ್ಯ 'ರಾಮಾಯಣ ದರ್ಶನಂ' ನಲ್ಲೂ ಸ್ಮರಿಸಿರುವುದನ್ನು ಅವರು ಗುರುತಿಸುತ್ತಾರೆ. ವಾಲ್ಮೀಕಿ, ವ್ಯಾಸ, ಭಾಸ, ಕಾಳಿದಾಸ, ಕಂಬ, ನನ್ನಯ ಮೊದಲಾದ ಭಾರತೀಯ ಕವಿಗಳನ್ನೂ ಹೋಮರ್, ವರ್ಜಿಲ್, ಡಾಂಟೆ, ಮಿಲ್ಟನ್ ಮುಂತಾದ ಪಾಶ್ಚಾತ್ಯ ಸಾಹಿತಿಗಳನ್ನೂ ನಮಿಸಿ ಶ್ರೀ ರಾಮಾಯಣ ದರ್ಶನಂ ಕಾವ್ಯ ಆರಂಭವಾಗುವುದೆಂದು ಅವರು ಗುರುತಿಸುತ್ತಾರೆ. ಪ್ರತಿಯೊಬ್ಬ ಕವಿಯೂ ತನ್ನ ಹಿಂದಿನ ಕವಿಗಳನ್ನು ನೆನೆದು ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಂಡಿರುವುದು ಅವರಿಗೆ ಮುಖ್ಯವಾಗಿ ಕಾಣುತ್ತದೆ. ಪ್ರತಿಯೊಬ್ಬ ಕವಿಯು ಹಿಂದಿನ ಪರಂಪರೆಯೊಂದಿಗೆ ಕೂಡುಕೊಳ್ಳುವಿಕೆಯನ್ನು ಏರ್ಪಡಿಸಿಕೊಂಡು ಹೊಸನೆಲೆಯಲ್ಲಿ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳಬೇಕೆಂಬ ಆಶಯ ಅವರದಾಗಿದೆ.

**೩.೬. ಕವಿತಾ ರೈ : ಪರಂಪರೆ ಜತೆಗೆ ಅನುಸಂಧಾನ**

ಕವಿ ವಿಮರ್ಶಕಿ, ಕಥೆಗಾರ್ತಿಯಾಗಿ ದಶಕದಿಂದೀಚೆಗೆ ಗಮನ ಸೆಳೆಯುವ ಕವಿತಾರೈ ಕಾವ್ಯದಲ್ಲಿ ಕಾಣುವ ಬದುಕಿನ ವಿಶ್ಲೇಷಣೆ, ಅವರ ವಿಮರ್ಶೆಯ ಬರಹಗಳಲ್ಲೂ ಇದೆ. 'ಅರಿವಿನ ನಡೆ' ವಿಮರ್ಶಾ ಕೃತಿಯಲ್ಲಿ ಜಾಗತೀಕರಣದಿಂದ ಸಾಂಸ್ಕೃತಿಕ ನಡುವಳಿಗಳ ವಿಶ್ಲೇಷಣೆ ಇರುವುದನ್ನು ಗಮನಿಸಬಹುದಾಗಿದೆ.

ಜಾಗತೀಕರಣದ ಹಾದಿಯಲ್ಲಿ ಅನಿವಾರ್ಯವಾಗಿ ಮಹಿಳೆಯರು ಚಾರಿತ್ರಿಕವಾಗಿ ಪುರುಷರು ಅಧೀನತೆಗೆ ಒಳಗಾಗಿರುವರೆಂದು ಕವಿತಾರೈ ಹೇಳುತ್ತಾರೆ. ಹಿಂದಿನ ಕಾಲದಿಂದಲೂ ಸ್ತ್ರೀಯರು ಪುರುಷರ ದಬ್ಬಾಳಿಕೆ ಅಧಿಕಾರಕ್ಕೆ ಬಳಸಿದ ದಾಳಗಳಂತೆ ಬಳಕೆಯಾಗಿರುವುದನ್ನು ಅವರು

ತಮ್ಮ "ಜಾಗತೀಕರಣ ಮತ್ತು ಮಹಿಳಾ ಅಸ್ತಿತ್ವದ ಪ್ರಶ್ನೆ" ಎಂಬ ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ. ಪುರುಷನು ಸ್ವಾರ್ಥಕ್ಕಾಗಿ ಮಹಿಳೆಯರ ಮೇಲೆ ಅಧಿಕಾರ ಚಲಾಯಿಸುವುದು, ಮೂಢನಂಬಿಕೆ, ಪುರಾಣದ ಹೆಸರಲ್ಲಿ ಅವಳನ್ನು ಶೋಷಣೆ ಮಾಡುವುದು ಮಾಡುತ್ತಿದ್ದಾರೆ. ಹಿಂದಿನ ಪರಂಪರೆಯಿಂದಲೂ ಇಂದಿಗೂ ಹಾಗೇ ಸಾಗಿ ಬಂದಿರುವ ವ್ಯವಸ್ಥೆ ಕುರಿತು ಅವರು ಆತಂಕ ವ್ಯಕ್ತಪಡಿಸುತ್ತಾರೆ. ಜಾಗತೀಕರಣದ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರ ಮೇಲೆ ಮತ್ತು ಅವರ ವೇತನದ ಮೇಲೆ, ಪುರುಷ ವ್ಯವಸ್ಥೆಯ ಕರಿನೆರಳಿರುವುದನ್ನು ಹೊಸ ತಲೆಮಾರಿನವರು ಅಧ್ಯಯನ ಮಾಡಬೇಕೆಂದು ಅವರು ಸೂಚಿಸುತ್ತಾರೆ. ಹೀಗೆ ಪ್ರಾಚೀನ ಮತ್ತು ಈಗಿನ ಕಾಲದ ಮಹಿಳೆಯರನ್ನು ಪರಂಪರೆಯ ನೆಲೆಯಲ್ಲಿ ವಿಮರ್ಶಿಸುವ ಬರಹಗಾರರು ಅವರಿಗೆ ಆಪ್ತರೆನಿಸುತ್ತಾರೆ. ಹಿಂದಿನಿಂದ ಸ್ತ್ರೀಯರ ಮೇಲೆ ನಡೆದು ಬಂದಿರುವ ಒಂದಲ್ಲ ಒಂದು ರೀತಿಯ ದೌರ್ಜನ್ಯಗಳು ನಿಲ್ಲಬೇಕು. ಅವಳಿಗೆ ಸಮಾನವಾದ ಕೂಲಿ, ಭದ್ರತೆ ಸಿಗಬೇಕೆಂಬ ಆಶಯವನ್ನು ಅವರು ವ್ಯಕ್ತಪಡಿಸುತ್ತಾರೆ.

ಕವಿತಾ ರೈ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿರುವ ಸ್ತ್ರೀಯರ ಕುರಿತು ಹೀಗೆ ಹೇಳುತ್ತಾರೆ: "ರಾಷ್ಟ್ರ ಎನ್ನುವ ಭಾವಾತ್ಮಕ ಸಂವೇದನೆಯ ಫಲವಾಗಿ, ಭಾರತದ ಬೃಹತ್ ಸ್ತ್ರೀ ಸಮೂಹ ರಾಷ್ಟ್ರೀಯ ಹೋರಾಟದಲ್ಲಿ ಪಾಲ್ಗೊಂಡಿದೆ. ವಿಜಯಲಕ್ಷ್ಮೀ ಪಂಡಿತ್, ಕಮಲಾ ನೆಹರು, ಸರೋಜಿನಿನಾಯ್ಡು, ಮೀರಾಬೆನ್, ಸುಚೇತಾ ಕೃಪಲಾನಿ ಇವರುಗಳಲ್ಲದೆ ಕರ್ನಾಟಕದ ಯಶೋಧರಮ್ಮ ದಾಸಪ್ಪ, ಉಮಾಬಾಯಿ ಕುಂದಾಪುರ, ಬೀನಾದಾಸ, ರುಕ್ಮಿಣಿ, ಲಕ್ಷ್ಮೀಪತಿ, ಕಮಲಾದೇವಿ ಚಟ್ಟೋಪಾದ್ಯಾಯ ಮೊದಲಾದವರ ಮಾರ್ಗದರ್ಶನದಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿದರು."[೧೦] ಹೀಗೆ ಬ್ರಿಟಿಷರ ಪ್ರವೇಶದ ನಂತರ ಶಿಕ್ಷಣದಲ್ಲಿ ಕ್ರಾಂತಿಯಾಗಿ, ಬಹುತೇಕ ಸ್ತ್ರೀಯರು ಪಾರಂಪರಿಕವಾಗಿ ಗೃಹಬಂಧನದಿಂದ ಹೊರ ಬಂದು ಚಳುವಳಿಯಲ್ಲಿ ಭಾಗವಹಿಸಿದರು ಎಂದು ಕವಿತಾ ಹೇಳುತ್ತಾರೆ. ಮಹಿಳೆಯರ ಚಳುವಳಿಯ ಹಿಂದೆ ಪಾಶ್ಚಾತ್ಯರ ಶಿಕ್ಷಣದ ಪ್ರಭಾವವಿದೆ. ಹೆಣ್ಣು ಮಕ್ಕಳ ಬಹುತೇಕ ಪ್ರಾಚೀನ ಕಾಲದಲ್ಲಿ ಪುರುಷನ ಅಡಿಯಾಳಾಗಿ, ಜೀವನ ನಡೆಸಿದರು. ತದನಂತರ ಶಿಕ್ಷಣದಿಂದ ಪಡೆದ ಎಚ್ಚರದ ಮೂಲಕ ತನ್ನ ಅಸ್ತಿತ್ವಕ್ಕಾಗಿ ಹೋರಾಡಿದಳು. ಇಂತಹ ಒಂದು ಸ್ತ್ರೀ ಸಮುದಾಯದ ಬಗ್ಗೆ ಕವಿತಾ ಕಾಳಜಿ ತೋರಿಸುತ್ತಾರೆ. ಹೊಸ ತಲೆಮಾರಿನ ಬರಹಗಾರರು ಇಂತಹ ಮಹಿಳೆಯರ ಕುರಿತು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಕೆಲಸ ಮಾಡುವ ಮನಸನ್ನು ಬೆಳೆಸಿಕೊಳ್ಳಬೇಕೆಂಬ ಹಾಗೂ ಆ ಮೂಲಕ ಎರಡು ತಲೆಮಾರಿನ ನಡುವೆ ಭಾಂದವ್ಯವನ್ನು ಮೂಡಿಸಬೇಕೆಂಬ ಆಶಯವನ್ನು ಕವಿತಾ ವ್ಯಕ್ತಪಡಿಸುತ್ತಾರೆ.

ಬಿ.ಎಂ.ಶ್ರೀಯವರು 'ಇಂಗ್ಲೀಷ್ ಗೀತಗಳು' ಬರೆದ ಕಾಲಘಟ್ಟದಲ್ಲಿ ಹಟ್ಟಿಯಂಗಡಿ

ನಾರಾಯಣರಾವ್, ಎಸ್.ಜಿ.ನರಸಿಂಹಾಚಾರ್, ಪಂಜೆಮಂಗೇಶರಾವ್ ಮತ್ತು ಗೋವಿಂದ ಪೈಗಳಂತಹ ಪ್ರಮುಖರು ಇಂಗ್ಲೀಷ್‌ನಿಂದ ಕಾವ್ಯಗಳನ್ನು ಕನ್ನಡಕ್ಕೆ ಅನುವಾದಿಸಿದ ಒಂದು ಪರಂಪರೆ ಒಂದೆಡೆ ಇದೆ. ಅದೇ ರೀತಿ ಜಯರಾಯಾಚಾರ್ಯ, ಎಸ್.ಜಿ.ಗೋವಿಂದ ರಾಜಯ್ಯಂಗಾರ್ಯ, ಎಚ್.ಚೆನ್ನಕೇಶವಯ್ಯ, ಎಂ.ಎನ್.ಕಾಮತ್, ಎಂ.ಎ.ತುಳಸೀಬಾಯಿ ಎಂ.ಎನ್.ಶ್ರೀನಿವಾಸರಾವ್ ಮೊದಲಾದರ ಬಿಡಿ ಬಿಡಿ ಅನುವಾದ ರಚನೆಗಳ ಪರಂಪರೆ ಇನ್ನೊಂದೆಡೆ ಇದೆ ಎಂದು ಕವಿತಾ ಗುರುತಿಸುತ್ತಾರೆ. ಎರಡು ಪರಂಪರೆಗಳನ್ನು ಅಂದಿನ ಕನ್ನಡ ಕಾವ್ಯ ಪರಂಪರೆಯಲ್ಲಿ ಹೊಸಗನ್ನಡ ಕಾವ್ಯದ ಹೊಸ ಸಾಧ್ಯತೆಗಳತ್ತ ಅನ್ವೇಷಣೆ ಪ್ರಯೋಗಗಳನ್ನು ನಡೆಸಿ ಬಿಕ್ಕಟ್ಟುಗಳನ್ನು ಅರಿಯಬೇಕೆಂಬ ಆಶಯವನ್ನು ಕವಿತಾ ರೈ ಅವರು ವ್ಯಕ್ತಮಾಡುತ್ತಾರೆ.

ಕನ್ನಡ ಅಥವಾ ಇತರ ಯಾವುದೇ ಪ್ರಾದೇಶಿಕ ಭಾಷಾ ಜಾನಪದಗಳ ಸಂಗ್ರಹ ಸಂಶೋಧನೆಯ ವಿಧಿವಿಧಾನ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿದೆ. ಎಂದು ಕವಿತಾ ಅಭಿಪ್ರಾಯಪಡುತ್ತಾರೆ. ಈ ಶತಮಾನದ ಆರಂಭದ ದಶಕಗಳಲ್ಲಿ ಪ್ರಾರಂಭಗೊಂಡ ಜಾನಪದ ಸಾಹಿತ್ಯ ಸಂಗ್ರಹ ಕಾರ್ಯವನ್ನು ಸ್ವಾತಂತ್ರ ಪೂರ್ವ ಮತ್ತು ಸ್ವಾತಂತ್ರೋತ್ತರ ನೆಲೆಯಲ್ಲಿ ಗುರುತಿಸುವುದಾದರೂ, ಮೊದಲೆಲ್ಲ ಸಂಗ್ರಹಗೊಂಡಿದ್ದು ಜನಪದ ಗೀತೆಗಳು ಮಾತ್ರ, ಸಮಗ್ರವಾಗಿ ಜಾನಪದ ಬದುಕನ್ನು ಶೋಧಿಸುವ ಕಾರ್ಯ ತುಂಬಾ ಆಧುನಿಕ ಆಲೋಚನೆಯಾಗಿದೆ. ಎಂದು ಅವರು ಹೇಳುತ್ತಾರೆ. ಮೊದಲ ತಲೆಮಾರಿನ ಜಾನಪದ ಸಂಗ್ರಹ ಕಾರ್ಯಕ್ಕೆ ಅದರದ್ದೇ ಮಹತ್ವ ಮತ್ತು ಸಂಸ್ಕೃತಿಯಲ್ಲಿ ಏಕತೆ ಗುರುತಿಸುವ ಬದುಕಿನ ರೀತಿ, ನೀತಿ, ನಂಬಿಕೆ, ಸಾಹಿತ್ಯ ಮುಂತಾದ ಸೃಜನಶೀಲ ವಿಚಾರಗಳಿಗೆ ಮಹತ್ವವಿರುವುದರಿಂದ ಮೊದಲ ಘಟ್ಟದ ಜಾನಪದ ಸಂಗ್ರಹವು ಅವರಿಗೆ ಇಷ್ಟವಾಗಿದೆ. ಮುಂದಿನ ತಲೆಮಾರಿನವರು ಅಲ್ಲಿನ ಮೌಖಿಕ ಸಾಹಿತ್ಯವನ್ನು ಭಿನ್ನ ನೆಲೆಗಳಲ್ಲಿ ಗ್ರಹಿಸಬೇಕೆಂಬ ಆಶಯವನ್ನು ಕವಿತಾ ವ್ಯಕ್ತಪಡಿಸುತ್ತಾರೆ. ಹಳೆಯ ಮತ್ತು ಹೊಸ ಜಾನಪದ ಸಂಗ್ರಹವನ್ನು ಮಾಡುವುದರೊಂದಿಗೆ ಬಹುಮುಖಿ ನೆಲೆಯ ಅಧ್ಯಯನಗಳು ಅವರಿಗೆ ಮುಖ್ಯವೆಂದು ಕಾಣುತ್ತವೆ.

ಕನ್ನಡ ಜಾನಪದ ಸಂಗ್ರಹದ ಕಡೆಗೆ ಸಂಶೋಧನೆಯ ಕಡೆಗೆ ಮೊದಲು ಗಮನ ಹರಿಸಿದವರು ಪಾಶ್ಚಾತ್ಯ ವಿದ್ವಾಂಸರೆಂದು ಕವಿತಾ ಹೇಳುತ್ತಾರೆ. ರೆವರೆಂಡ್ ಕಿಟ್ಟಲ್, ಕ್ಯಾಪ್ಟನ್ ಮೆಕೆಂಜಿ, ಜೆ.ಎಫ್.ಫ್ಲೀಟ್, ಸಿ.ಇ.ಗೋವರ್, ಆರ್.ಸಿ.ಟೆಂಪರ್ ಮುಂತಾದವರು ಕನ್ನಡ ಜಾನಪದ ಕುರಿತು ಸಾಂದರ್ಭಿಕವಾಗಿ ಲೇಖನಗಳನ್ನು ಪ್ರಕಟಿಸಿದರು. ಹಾಗಾಗಿ ಕನ್ನಡ ಜಾನಪದ ಸಂಗ್ರಹದಲ್ಲಿ ತೊಡಗಿಕೊಂಡ ಪಾಶ್ಚಾತ್ಯರ ಸಂಶೋಧನಾ ಕ್ರಮವನ್ನು ಕವಿತಾ ಒಪ್ಪುತ್ತಾರೆ. ಪಾಶ್ಚಾತ್ಯರು ತೋರಿಸಿಕೊಟ್ಟದಾರಿಯಲ್ಲಿ ಕನ್ನಡ ಜಾನಪದ ಸಂಗ್ರಹಕಾರರಾದ ಹಲಸಂಗಿ

ಗಳೆಯರಾದ ಚೆನ್ನ ಮಲ್ಲಪ್ಪ, ಬೇಂದ್ರೆ, ಮಾಸ್ತಿ, ಸಿಂಪಿ ಲಿಂಗಣ್ಣ, ತಪಸ್ವೀ ಕುಮಾರ್ ಮುಂತಾದವರು ಜಾನಪದದಲ್ಲಿ ತೊಡಗಿಕೊಂಡದ್ದು ಒಳ್ಳೆಯ ಬೆಳವಣಿಗೆಯೆಂಬುದು ಅವರ ಅಭಿಪ್ರಾಯ. ಜಾನಪದ ಪರಂಪರೆಯನ್ನು ಕಟ್ಟಿ ಬೆಳೆಸುವ ಜಾನಪದ ವಿದ್ವಾಂಸರು ಎಲ್ಲಾ ನೆಲೆಗಳಲ್ಲೂ ಸಕ್ರಿಯವಾಗಿ ತೊಡಗಿಸಿಕೊಳ್ಳಬೇಕೆಂಬ ಆಶಯ ಅವರದ್ದಾಗಿದೆ. ಹೀಗೆ ಜಾನಪದದಲ್ಲಿ ಸಕ್ರಿಯವಾಗಿ ತೊಡಗಿಕೊಳ್ಳುವ ಜಾನಪದ ವಿದ್ವಾಂಸರನ್ನು ಅವರು ಇಷ್ಟಪಡುವಂತೆ ಜಾನಪದ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿಕೊಳ್ಳದ ಜಾನಪದ ತಜ್ಞರನ್ನು ಅವರು ಇಷ್ಟಪಡುವುದಿಲ್ಲ.

### ೩.೭. ಹೊಸ ತಲೆಮಾರಿನ ವಿಮರ್ಶಕರು : ತೌಲನಿಕ ವಿಶ್ಲೇಷಣೆ

ಹೊಸ ತಲೆಮಾರಿನ ವಿಮರ್ಶಕರು ಪರಂಪರೆ ಬಗ್ಗೆ ಹೊಂದಿರುವ ನಿಲುವುಗಳ ನಡುವಣ ವಿಶಿಷ್ಟ ಲಕ್ಷಣಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

* ವಿಕ್ರಮ ವಿಸಾಜಿಯವರು ಕನ್ನಡ ಅಧ್ಯಾಪಕರಾಗಿರುವುದರಿಂದ ಮತ್ತು ಸ್ವತಃ ಕವಿಗಳೂ ಆಗಿರುವುದರಿಂದ ತಮ್ಮ ಲೇಖನಗಳಲ್ಲಿ ಕವನಗಳನ್ನು ಬಳಸಿಕೊಳ್ಳುವ ಮೂಲಕ ವಿಮರ್ಶೆಗೆ ಕಾವ್ಯಾತ್ಮಕ ಸ್ಪರ್ಶವನ್ನು ತಂದಿರುವುದು ಅವರ ವಿಶಿಷ್ಟತೆಯಾಗಿದೆ. ಅವರು ಹೈದ್ರಾಬಾದ್ ಕರ್ನಾಟಕದವ ರಾಗಿರುವುದರಿಂದ ಹೆಚ್ಚಾಗಿ ಪ್ರಾದೇಶಿಕ ನೆಲೆಯಲ್ಲಿ ಚರ್ಚೆ ಮಾಡಿದ್ದಾರೆ. ಇತರೆ ವಿಮರ್ಶಕರಿಗೆ ಹೋಲಿಸಿದರೆ ವಿಸಾಜಿಯವರು ತಮ್ಮ ವಿಮರ್ಶಾ ಲೇಖನಗಳಲ್ಲಿ ಹೊಸ ತಲೆಮಾರಿನ ಬರಹಗಾರರು, ಕವಿಗಳು, ವಿಮರ್ಶಕರನ್ನು ಹೆಚ್ಚಾಗಿ ಪ್ರಸ್ತಾಪಮಾಡುತ್ತಾರೆ. ಆದರೆ ಪಾಶ್ಚಾತ್ಯ ಬರಹಗಾರರ ಉಲ್ಲೇಖ ಅಥವಾ ವಿಮರ್ಶಕರ, ಕವಿಗಳ ಪ್ರಸ್ತಾಪ ಅಷ್ಟಾಗಿ ಮಾಡುವುದಿಲ್ಲ. ಪುರಾಣ ಮತ್ತು ಚರಿತ್ರೆಯ ಮೂಲಕ ಸಾಹಿತ್ಯವನ್ನು ಕಟ್ಟಿಕೊಡುವ ಅವರ ಬರವಣಿಗೆಯ ಕ್ರಮ ವಿಶಿಷ್ಟವಾಗಿದೆ. ಹಿರಿಯ ತಲೆಮಾರಿನ ಕವಿಗಳ ಸಾಹಿತ್ಯ ಕೃಷಿಯನ್ನು ಪ್ರಸ್ತಾಪ ಮಾಡುತ್ತಾ ಯುವ ಬರಹಗಾರರನ್ನು ತಿದ್ದುವ ಅವರ ಕ್ರಮವು ವಿಶಿಷ್ಟವಾಗಿದೆ.

* ಬಿ.ಎಂ.ಪುಟ್ಟಯ್ಯ ನವರು ತಮ್ಮ 'ಕದಡು' ಕೃತಿಯಲ್ಲಿ ದಲಿತ ಪ್ರಜ್ಞೆಯನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ. ಪ್ರಾಚೀನ 'ಹರಿಶ್ಚಂದ್ರ ಕಾವ್ಯ' ಕೃತಿಯ ಮೂಲಕ ಅಲ್ಲಿನ ರಾಜತ್ವದ ಮತ್ತು ಪ್ರಭುತ್ವದ ಕಲ್ಪನೆಯನ್ನು ಒಡೆದು ಕಟ್ಟುವ ಅವರ ಕೆಲಸ ವಿಶಿಷ್ಟವಾಗಿದೆ. ಹೊಸತಲೆಮಾರಿನ ವಿಮರ್ಶಕರಲ್ಲಿ ದಲಿತ ನೆಲೆಯಲ್ಲಿಯೇ ಇಡೀ ವಿಮರ್ಶಾ ಕೃತಿಯನ್ನು ಚರ್ಚಿಸಿರುವುದು ಅವರ ವಿಶಿಷ್ಟತಯಾಗಿದೆ. ಈಗಾಗಲೇ ಮೇಲ್ವರ್ಗ ಸ್ಥಾಪಿಸಿರುವ ಪ್ರಭುತ್ವ ವ್ಯವಸ್ಥೆಯನ್ನು ಹೊಡೆದು ಜನ ಸಾಮಾನ್ಯರ ನೆಲೆಯಲ್ಲಿ ಅದನ್ನು ಕಾಣುವ ಅವರ ಕ್ರಮವು ಭಿನ್ನವಾಗಿದೆ. ಮೂಲತಃ ಪುಟ್ಟಯ್ಯನವರು ಕೆಳವರ್ಗದ ನೆಲೆಯಿಂದ ಬಂದಿರುವುದರಿಂದ, ಪ್ರಾಚೀನ

ಕಾಲದಿಂದಲೂ ಮೂಡಿ ಬಂದಿರುವ ದಲಿತರ ಬಗೆಗಿನ ಅಸಡ್ಡೆಯನ್ನು ಪುನರ್‌ವಿಮರ್ಶೆಗೆ ಒಳಪಡಿಸಿದ್ದಾರೆ. ಕೃತಿಯ ಮೂಲಕವೇ ಮೇಲ್ವರ್ಗದ ದರ್ಪವಿರೋಧಿಸುತ್ತಾ ಕೆಳವರ್ಗದ ಬದುಕನ್ನು ಅರ್ಥೈಸಲು ಅವರು ಪ್ರಯತ್ನಿಸಿದ್ದಾರೆ. ಪುಟ್ಟಯ್ಯನವರು ಕೆಲವೇ ಕೆಲವು ದಲಿತ ಕೃತಿಗಳು ಕವಿಗಳನ್ನು ಪ್ರಸ್ತಾಪ ಮಾಡುತ್ತಾರೆ. ಅವರಲ್ಲಿ ಅದರಾಚೆಗೆ ವ್ಯಾಪಕ ಹುಡುಕಾಟವಿಲ್ಲದಿರುವುದನ್ನು ಗಮನಿಸಬಹುದು.

* ಜೋಗಿಯವರು ಕಥೆಗಾರರು ಹಾಗೂ ಪತ್ರಕರ್ತರು ಆಗಿರುವುದರಿಂದ ತಮ್ಮ ಆಕರ್ಷಕ ಬರವಣಿಗೆಯ ಮೂಲಕ ಸಾಮಾನ್ಯ ಓದುಗರಿಗೂ ಆಪ್ತವಾಗುತ್ತಾರೆ. ಹೊಸ ತಲೆಮಾರಿನ ವಿಮರ್ಶಕರ ಪಟ್ಟಿಯಲ್ಲಿ ಹೆಚ್ಚು ಜನಪ್ರಿಯವಾಗಿ ಬರೆಯುವ ವಿಮರ್ಶಕರು ಜೋಗಿಯವರಾಗಿದ್ದಾರೆ. ತಂದೆಯ ಮತ್ತು ಮಗನ ನಡುವಿನ ಸಾಹಿತ್ಯದ ಪರಂಪರೆಯ ಅನುಸಂಧಾನವನ್ನು ವಿಶಿಷ್ಟವಾಗಿ ಅವರು ಗುರುತಿಸಿದ್ದಾರೆ.

* ಜೋಗಿಯವರು ಪರಂಪರೆಯ ನೆಲೆಯಲ್ಲಿ ಕವಿ ಮತ್ತು ಅವನ ಮಗನಿಗಿರುವ ಸಾಮ್ಯತೆ ಮತ್ತು ಬದ್ಧತೆಗಳನ್ನು ಗುರುತಿಸುವುದು ಮುಖ್ಯವಾಗಿದೆ. ತಂದೆಯ ಅದರ್ಶದ ಮಾತುಗಳನ್ನು ಮಗ ಪಾಲಿಸುವ ಮೂಲಕ ಹೊಸ ತಲೆಮಾರಿನ ಲೇಖಕರಿಗೆ ಆದರ್ಶ ಪ್ರಾಯರಾಗಿ ತೇಜಸ್ವಿಯವರನ್ನು ಗುರುತಿಸಿದ್ದಾರೆ. ವಿಕ್ರಮ ವಿಸಾಜಿಯವರು ಕೇವಲ ಕನ್ನಡದ ಬರಹಗಾರರನ್ನು ಮಾತ್ರ ಹೆಸರಿಸಿದರೆ, ಜೋಗಿಯವರು ಕನ್ನಡ ಬರಹಗಾರರ ಜೊತೆ ಪಾಶ್ಚಾತ್ಯ ಬರಹಗಾರರು ಹಾಗೂ ಪತ್ರಕರ್ತರನ್ನು ಪರಂಪರೆಯ ಕೊಡುಕೊಳ್ಳುವಿಕೆಯ ನೆಲೆಯಲ್ಲಿ ಗುರುತಿಸುತ್ತಾರೆ. ಹಿರಿಯ ತಲೆಮಾರಿನ ಬರಹಗಾರರು ಅನುಸರಿಸಿಕೊಂಡು ಬಂದಿರುವ ನೈತಿಕ ಮೌಲ್ಯಗಳನ್ನು ಈಗಿನವರು ಪಾಲಿಸಬೇಕೆಂಬ ಅವರ ಆಶಯವು ಇತರರಿಗಿಂತ ಭಿನ್ನವಾಗಿದೆ.

* ತಾರಿಣಿ ಶುಭದಾಯಿನಿ ಮತ್ತು ಕವಿತಾರೈರವರು ಸ್ತ್ರೀ ವಿಮರ್ಶೆಯ ಕುರಿತು ಲೇಖನಗಳನ್ನು ಬರೆದಿದ್ದಾರೆ. ಕೆಲವು ಹಿರಿಯ ಲೇಖಕಿಯರ ಮೂಲಕ ಹಾಗೂ ವಚನಕಾರ್ತಿಯರ ಮೂಲಕ ಸ್ತ್ರೀಲೋಕವನ್ನು ಅವರು ನೋಡಿದರೆ ಕವಿತಾ ರೈ ಅವರು ಜಾಗತೀಕರಣ, ಆಧುನಿಕತೆಯ ನೆಲೆಯಲ್ಲಿ ಸ್ತ್ರೀಯು ಪ್ರಸ್ತುತ ಎದುರಿಸುತ್ತಿರುವ ಸಮಸ್ಯೆಗಳನ್ನು ಮತ್ತು ಪುರಾಣದ ಕಾಲದಲ್ಲಿ ಪುರುಷ ದೌರ್ಜನ್ಯವಿರುವುದನ್ನು ತಮ್ಮ ಲೇಖನಗಳಲ್ಲಿ ಪ್ರಸ್ತಾಪ ಮಾಡುತ್ತಾರೆ. ಇಬ್ಬರಿಗೂ ಭಾರತೀಯ ಮತ್ತು ಪಾಶ್ಚಾತ್ಯ ಲೇಖಕಿಯರ ಮೂಲಕ ಕನ್ನಡದ ಲೇಖಕಿಯರು ಸಾಹಿತ್ಯ ಚಟುವಟಿಕೆಯಲ್ಲಿ ಸಕ್ರೀಯವಾಗಿ ತೊಡಗಿಕೊಳ್ಳಬೇಕೆಂಬ ಆಶಯ ಇದೆ. ತಾರಿಣಿಯವರು ಪರಂಪರೆಯನ್ನು ದೇಶೀ ನೆಲೆಯಲ್ಲಿ ನೋಡಿದರೆ, ಕವಿತಾ ರೈರವರು ಜಾನಪದೀಯ ನೆಲೆಯಲ್ಲಿ ಹಾಗೂ ವಿದ್ವಾಂಸರುಗಳನ್ನು ಉಲ್ಲೇಖ ಮಾಡುತ್ತಾರೆ. ಆ

ಮೂಲಕ ಅವರು ಕನ್ನಡ ಜಾನಪದ ಸಂಗ್ರಹದಲ್ಲಿ ತೊಡಗಿಕೊಂಡು ಮುಂದಿನ ತಲೆಮಾರಿನವರಿಗೆ ಜಾನಪದ ವಿದ್ವಾಂಸರು ಮಾದರಿಯಾಗಬೇಕೆಂಬ ಅವರು ಒಲವನ್ನು ವ್ಯಕ್ತಪಡಿಸುತ್ತಾರೆ.

* ಹರೀಶ್ ಅವರು ನವೋದಯ ಕಾಲದ ಕವಿಗಳ ಮೂಲ ಸಂಸ್ಕೃತಿಯನ್ನು ಕಟ್ಟುವುದು ಮಾತ್ರವಲ್ಲದೆ, ಹೊಸತಲೆಮಾರಿನ ವಿಮರ್ಶಕರು ವಿಮರ್ಶೆಯಲ್ಲಿ ಹೇಗೆ ತೊಡಗಿಕೊಳ್ಳಬೇಕೆಂದು ಅವರು ಹೇಳುತ್ತಾರೆ. ಜೋಗಿಯವರು ಪಾಶ್ಚಾತ್ಯ ಕವಿಗಳನ್ನು ಕನ್ನಡ ಕವಿಗಳಿಗೆ ಹೋಲಿಸಿದರೆ ಹರೀಶರವರು ಕನ್ನಡ ಕವಿಗಳನ್ನು ಪಾಶ್ಚಾತ್ಯ ಕವಿಗಳಿಗೆ ಹೋಲಿಸುವ ಕ್ರಮವನ್ನು ಇಷ್ಟಪಡುವುದಿಲ್ಲ. ಕವಿಗಳನ್ನು ಸೀಮಿತ ನೆಲೆಯಲ್ಲಿ ಇಟ್ಟುಕೊಂಡು ವಿಮರ್ಶೆ ಮಾಡುವ ಕ್ರಮ ಸರಿಯಲ್ಲವೆಂದು ಅವರ ಅಭಿಪ್ರಾಯವಾಗಿದೆ.

* ವಿಸಾಜಿಯವರು ಹಿರಿಯ ಮತ್ತು ಕಿರಿಯ ಬರಹಗಾರರ ಮೂಲಕ ಬರವಣಿಗೆಯ ಕ್ರಮ ಸಾಹಿತ್ಯ ರಚನೆಗೆ ಹೇಗೆ ತೊಡಗಿಕೊಳ್ಳಬೇಕೆಂದು ಹೇಳಿದರೆ, ಪುಟ್ಟಯ್ಯನವರು ಪ್ರಾಚೀನ ಕೃತಿ ಕಥೆಗಳನ್ನು ವಿಮರ್ಶೆಗೆ ಒಳಪಡಿಸಿ ಅಂದಿನ ಕಾಲದವರು ದಲಿತರನ್ನು ಹೇಗೆ ಚಿತ್ರಿಸಿದರೆಂಬುದನ್ನು ವಿಶ್ಲೇಷಿಸುತ್ತಾರೆ. ಜೋಗಿಯವರು ಕುವೆಂಪು–ತೇಜಸ್ವಿಯ ಮೂಲಕ, ಯುವ ಬರಹಗಾರರಿಗೆ ಆದರ್ಶ ನೈತಿಕ ಮೌಲ್ಯಗಳನ್ನು ಹೇಳುತ್ತಾರೆ. ಕೇವಲ ಬರಹಗಾರರನ್ನು ಬದಲಾಯಿಸುವುದಲ್ಲದೆ. ಪತ್ರಕರ್ತ ಜಗತ್ತಿನ ಹಿರಿಯ ವ್ಯಕ್ತಿಗಳನ್ನು ಪರಿಚಯಿಸುವ ಅವರ ಕ್ರಮ ವಿಶಿಷ್ಟವಾಗಿದೆ. ತಾರಿಣಿಯವರು ಪ್ರಮುಖ ಮಹಿಳಾ ಬರಹಗಾರರ ಮೂಲಕ ಮುಂದಿನ ಸ್ತ್ರೀವಾದಿ ವಿಮರ್ಶೆ ಹೇಗೆ ಸಾಗಬೇಕೆಂದು ಹೇಳುತ್ತಾರೆ. ಕುವೆಂಪುರವರ ಕೃತಿಯ ರಚನೆಯ ಮೊದಲು ತನ್ನ ಹಿಂದಿನ ಕವಿಗಳನ್ನು ನೆನೆಯುವ ಕ್ರಮ ಮುಂದಿನವರಿಗೆ ಮಾದರಿಯಾಗಬೇಕೆಂಬ ಆಶಯವನ್ನು ಹರೀಶರವರು ವ್ಯಕ್ತಪಡಿಸುತ್ತಾರೆ. ಕವಿತಾರೈ ಜಾಗತೀಕರಣದ ನೆಲೆಯಲ್ಲಿ ಸ್ತ್ರೀಯ ಅಸ್ತಿತ್ವವನ್ನು ಹುಡುಕುವ ಮತ್ತು ಪ್ರಾಚೀನ ಕಾಲದ ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯನ್ನು ಪುರುಷರು ನಡೆಸಿಕೊಂಡ ಬಗ್ಗೆ ಹೇಳುತ್ತಾರೆ, ತಾರಿಣಿಯವರು ಕೃತಿಯ ಒಳಗೆ ಸ್ತ್ರೀಯ ಅಸ್ತಿತ್ವವನ್ನು ಹುಡುಕಾಡುವುದರ ಮೂಲಕ ಅದೇ ನೆಲೆಯ ಸ್ತ್ರೀ ಅಸ್ಮಿತೆಯ ಹುಡುಕಾಟ ಕವಿತಾರೈ ಅವರಿಗಿಂತ ಹೇಗೆ ಭಿನ್ನವಾಗಿದೆ ಎಂದು ವಿಶ್ಲೇಷಿಸುತ್ತಾರೆ.

* ಕವಿತಾ ರೈ ರವರು ಪರಂಪರೆಯನ್ನು ರಾಷ್ಟ್ರೀಯ ಸ್ವತಂತ್ರ ಹೋರಾಟದ ಕಲ್ಪನೆಯಲ್ಲಿ ನೋಡುತ್ತಾರೆ. ಪ್ರಾಚೀನ ಕಾಲದಲ್ಲಿ ಹೆಣ್ಣು ಗೃಹಬಂಧನದಲ್ಲಿದ್ದರೆ ಇಂದು ಶಿಕ್ಷಣ ಪಡೆದು ಎಲ್ಲಾ ರಂಗಗಳಲ್ಲೂ ಮುಂದಿರುವುದನ್ನು ಎರಡು ಪರಂಪರೆಯ ನೆಲೆಯಲ್ಲಿ ಮುಂದಿನವರಿಗೆ ಅವರು ಅರ್ಥೈಸುತ್ತಾರೆ. ತಾರಿಣಿಯವರು ಇತ್ತೀಚೆಗೆ ಬರೆಯುವ ಪುಟ್ಟ ಹುಡುಗಿಯ ಕವನವನ್ನು ಅಕ್ಕಮಹಾದೇವಿಗೆ ಸಮೀಕರಿಸಿ ಗುರುತಿಸುವ ಕ್ರಮ ರೈ ಅವರಿಗಿಂತಲೂ

ಭಿನ್ನವಾಗಿದೆ, ಕವಿತಾ ಸ್ವಾತಂತ್ರ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರು ಮತ್ತು ಪಾಶ್ಚಾತ್ಯ ವಿದ್ವಾಂಸರುಗಳ ಮೂಲಕ ಪರಂಪರೆಯ ಅನುಸಂಧಾನ ಏರ್ಪಡಿಸಿದರೆ, ತಾರಿಣಿಯವರು ವಚನಗಾರ್ತಿಯರು ಮತ್ತು ಕನ್ನಡದ ಸ್ತ್ರೀವಾದಿ ಲೇಖಕಿಯರ ಮೂಲಕ ಸ್ತ್ರೀ ಪರಂಪರೆಯನ್ನು ಕಟ್ಟಿಕೊಡುತ್ತಾರೆ. ಇತರೆ ಪುರುಷ ಹೊಸತಲೆಮಾರಿನ ವಿಮರ್ಶಕರು ಮಹಿಳಾ ಲೇಖಕಿಯರ ಹೆಸರುಗಳ ಬಳಕೆ ಮಾಡಿಕೊಂಡಿಲ್ಲ. ಹಿರಿಯ ಪುರುಷ ಬರಹಗಾರರು ಕವಿಗಳನ್ನು ಪಾಶ್ಚಾತ್ಯ ಲೇಖಕರನ್ನು ಉದಾಹರಣೆ ಕೊಡುತ್ತಾರೆ. ಸ್ತ್ರೀವಾದಿ ನೆಲೆಯ ವಿಮರ್ಶಕಿಯರು ಸ್ತ್ರೀವಾದಿ ನೆಲೆಯಲ್ಲಿ ಪುರುಷ ವಿಮರ್ಶಕರು ಅಷ್ಟಾಗಿ ಸ್ತ್ರೀಪರ ಕಾಳಜಿ ವ್ಯಕ್ತವಾಗದೆ ರಚನೆಯಲ್ಲಿ ತೊಡಗಿರುವುದನ್ನು ಗಮನಿಸಬಹುದು.

**ಟಿಪ್ಪಣಿಗಳು:**

೧. ವಿಕ್ರಮ ವಿಸಾಜಿ, ಬೆಳಗಿನ ಮುಖ, ಪು.೨

೨. ಅದೇ, ಪು.೩

೩. ಅದೇ, ಪು.೬

೪. ಬಿ.ಎಂ. ಪುಟ್ಟಯ್ಯ, ಕದಡು, ಪು.೭೪

೫. ಅದೇ, ಪು.೪೫

೬. ಜೋಗಿ, ಜಾನಕಿ ಕಾಲಂ, ಪು.೮೪.

೭ ಅದೇ, ಪು.೮೫

೮. ತಾರಿಣಿ ಶುಭದಾಯಿನಿ, ಹೆಡೆಯಂತಾಡುವ ಸೊಡರು, ಪು.೧೬

೯. ಅದೇ, ಪು.೨೧

೧೦. ಕವಿತಾ ರೈ, ಅರಿವಿನ ನಡೆ, ಪು.೨೬

# ಅಧ್ಯಾಯ ೪

# ಹೊಸ ತಲೆಮಾರಿನ ವಿಮರ್ಶಕರು : ಲೋಕದೃಷ್ಟಿ

## ೪.೧ ವಿಕ್ರಮ ವಿಸಾಜಿ : ಲೋಕದೃಷ್ಟಿ

ವಿಕ್ರಮ ವಿಸಾಜಿಯವರು ಸಮಾಜ ಅಥವಾ ಲೋಕ ಕುರಿತು ತಳೆದಿರುವ ನಿಲುವುಗಳನ್ನು 'ಬೆಳಗಿನ ಮುಖ' ಕೃತಿಯ ಮೂಲಕ ಅರ್ಥೈಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಬರಹದ ತೀವ್ರತೆಯ ಕುರಿತು ವಿಕ್ರಮ ವಿಸಾಜಿಯವರು ಕೊಡುವ ಹೋಲಿಕೆ ಅವರ ಜೀವನ ದೃಷ್ಟಿಕೋನವನ್ನು ತಿಳಿಸುತ್ತದೆ. ಟೈಟಾನಿಕ್ ಸಿನಿಮಾದ ನಾಯಕ, ನಾಯಕಿಯನ್ನು ರಕ್ಷಿಸಿ ಬದುಕಿನ ತೀರಕ್ಕೆ ಅವಳನ್ನು ತಲುಪಿಸುತ್ತಾನೆ. ಸಿನಿಮಾದ ಕೊನೆಯಲ್ಲಿ ನಾಯಕ ಒಂದು ಹಲಗೆಯ ಸಹಾಯದಿಂದ ನಾಯಕಿಯನ್ನು ಬದುಕಿಸಿ ತಾನು ಸಾಯುತ್ತಾನೆ. ಹಾಗೇ ಬರಹಗಾರನಾದವನು ಸಮಾಜಕ್ಕಾಗಿ ಪ್ರೀತಿಯ ಹಲಗೆಯನ್ನು ಹುಡುಕಬೇಕಿದೆ. ಅದರ ಮೂಲಕ ಬರವಣಿಗೆ ಸೃಜನಶೀಲ ಗುಣ ಪಡೆದು ಜನ ಸಾಮಾನ್ಯರನ್ನು ಬದುಕಿನ ಜೀವಂತಿಕೆಯ ಕಡೆ ಸಾಗಿಸಬೇಕೆಂಬ ಅವರ ನಿಲುವು 'ಬರಹ, ತಾತ್ವಿಕತೆ ಮತ್ತು ಯುವ ಪೀಳಿಗೆ' ಎಂಬ ಲೇಖನದಲ್ಲಿ ವ್ಯಕ್ತವಾಗಿದೆ.

ಇತ್ತೀಚಿಗೆ ಕೆಲವು ಬರಹಗಾರರಲ್ಲಿ ಕೀಳು ಪ್ರವೃತ್ತಿ ಬೆಳೆದು ಬಿಟ್ಟಿದೆ. ಅದೇನೆಂದರೆ ತಾನೊಬ್ಬನೇ ಉಳಿದುಕೊಂಡರೆ ಸಾಕು. ಬೇರೆಯವರು ಏನಾದರೇನು ಎಂಬ ನಿಲುವು. ಇಂತಹ ನಿಲುವಿನ ಬರಹಗಾರರ ಬಗ್ಗೆ ಅವರಿಗೆ ತಿರಸ್ಕಾರವಿದೆ. ಇಂತಹವರು ಜೀವನದ ನೌಕೆಯಲ್ಲಿ ಮುಳುಗಿ ಹೋಗುತ್ತಾರೆ ಎಂದು ಅವರು ಭಾವಿಸುತ್ತಾರೆ. ನಿಜವಾದ ಬರಹಗಾರ ತನ್ನೊಂದಿಗೆ ಇತರೆ ಬರಹಗಾರರನ್ನು ಬೆಳಸಬೇಕು. ಅಷ್ಟೇ ಅಲ್ಲ ಅವರಿಗೆ ದಾರಿದೀಪವಾಗಿ ಬೆಳೆಯಲು ಸಹಾಯ ಮಾಡಬೇಕು. ಅಂತಹ ಬರಹಗಾರರೆ ಶಾಶ್ವತವಾಗಿ ನಮ್ಮ ನಡುವೆ ಉಳಿದುಕೊಳ್ಳುತ್ತಾರೆ. ಎಂದು ಅವರು ಹೇಳುತ್ತಾರೆ.

"ಲೇಖಕನಾದವನು ಬರಹದ ದೇಹವನ್ನಷ್ಟೆ ಕೊಬ್ಬಿಸದೆ ಮಿದುಳನ್ನು ಮಾತ್ರ ಚಿಗಿಸದೆ ಅದರ ಹೃದಯದ ಆರೋಗ್ಯ ಕಾಪಾಡಬೇಕಿದೆ."[೧] ಎಂದು ಹೇಳುವ ವಿಕ್ರಮ ವಿಸಾಜಿಯವರು, ಸಮಾಜದೊಳಗಿನ ಸಂಬಂಧಗಳನ್ನು ಬೌದ್ಧಿಕವಾಗಿ ಗ್ರಹಿಸದೆ, ಹೃದಯದ ಮೂಲಕ ಹತ್ತಿರದಿಂದ ಮಾನವೀಯ ನೆಲೆಯಿಂದ ಗ್ರಹಿಸಬೇಕು. ಅಂತಹ ವಿಮರ್ಶಕರು, ಲೇಖಕರು, ಮುಖ್ಯವೆಂದು

ಅವರ ನಿಲುವು ಆಗಿದೆ. ನಮ್ಮ ಸಮಾಜದಲ್ಲಿ ಅನೇಕ ವರ್ಗದ ಜನರಿದ್ದಾರೆ. ಆದರೆ ಕೆಳವರ್ಗದ ಜನರಲ್ಲಿ ಮಾತ್ರ ನೋವಿದೆ. ಮೇಲ್ವರ್ಗದವರಲ್ಲಿ ನೋವು ಇಲ್ಲವೆಂದು ತಿಳಿದರೆ ತಪ್ಪಾಗುತ್ತದೆ. ಪ್ರತಿಯೊಬ್ಬರಲ್ಲೂ ನೋವು ಇದೆ. ಅದನ್ನು ಅರ್ಥ ಮಾಡಿಕೊಂಡು ಸ್ಪಂದಿಸಬೇಕಾಗಿರುವುದು ಬರಹಗಾರರ ಜವಾಬ್ದಾರಿ ಎಂದು ಅವರು ಭಾವಿಸುತ್ತಾರೆ.

ಬರಹಗಾರನ ಸಾಂಸ್ಕೃತಿಕ ಅಪರಾಧಗಳು ಕುರಿತಂತೆ ವಿಸಾಜಿಯವರ ನಿಲುವುಗಳು ವ್ಯಕ್ತವಾಗಿವೆ. "ಬರಹಗಾರ ಕೋಮುವಾದಿಯಂತೆ ವರ್ತಿಸುವ ಕೆಲವು ಸಂಕೀರ್ಣ ಸಾಮಾಜಿಕ ಸಂದರ್ಭದಲ್ಲಿ ಸೇಫ್ಟಿಯಾದ ನಿಲುವು ತಾಳುವ, ಸತ್ಯದ ಅರಿವಿದ್ದು ಅದನ್ನು ಹೇಳದೇ ಇರುವ, ಅನೈತಿಕತೆಗೆ ಪ್ರೋತ್ಸಾಹಿಸುವ, ಪೂರ್ವಗ್ರಹಗಳಿಂದ ಸ್ಯಾಡಿಸ್ಟ್ ಆಗುವ, ಪ್ರಭುತ್ವದ ನಂಬಿಕಸ್ಥ ನಾಯಿಯಂತೆ ಬದುಕುವ ಬರಹಗಾರರ"[೨] ಕುರಿತು ಅವರಿಗೆ ಕೋಪವಿದೆ. ಅಂತಹ ಬರಹಗಾರರು ವ್ಯವಸ್ಥೆಯನ್ನು ಹಾಳುಗೆಡುವುತ್ತಾರೆ. ಈ ಮೇಲಿನ ಮನಸ್ಥಿತಿಗಳಿಂದ ಮುಕ್ತವಾಗಿ ಬರೆಯುವ ಬರಹಗಾರರು ವಿಕ್ರಮ ವಿಸಾಜಿಯವರಿಗೆ ಆತ್ಮೀಯರಾಗುತ್ತಾರೆ.

ತಾತ್ವಿಕವಾಗಿ ಒಂದು ಸಿದ್ಧಾಂತ, ದೃಷ್ಟಿಕೋನದಲ್ಲಿ ಬರೆಯುವ ಅಥವಾ ವಿಮರ್ಶಿಸುವ ವಿಮರ್ಶಕರು. ಒಂದು ನೆಲೆಯಲ್ಲಿ ಮಾತ್ರ ಕೃತಿಯನ್ನು ನೋಡಲು ಸಾಧ್ಯವಾಗುತ್ತದೆ. ಅವರು ಆ ಕೃತಿಯ ಬೇರೆ ಮಗ್ಗಲುಗಳನ್ನು ನೋಡುವುದಿಲ್ಲ. ಇಂತಹ ಒಂದು ತಾತ್ವಿಕತೆಗೆ ಒಳಪಟ್ಟು ರಚನೆಯಾಗುವ ವಿಮರ್ಶೆ ಹಾಗೂ ವಿಮರ್ಶಕರ ಬಗ್ಗೆ ವಿಸಾಜಿಯವರಿಗೆ ತಿರಸ್ಕಾರವಿದೆ. ಆದ್ದರಿಂದ ಒಂದು ಕೃತಿಯನ್ನು ಒಂದೇ ಪರಿಕಲ್ಪನೆಯಲ್ಲಿ ನೋಡದೆ, ಎಲ್ಲಾ ನೆಲೆಯಲ್ಲೂ ಆ ಕೃತಿಯನ್ನು ಅಧ್ಯಯನ ಮಾಡಿ ಮೌಲ್ಯವನ್ನು ನಿರ್ಣಯ ಮಾಡಬೇಕೆಂದು ಅವರು ಭಾವಿಸುತ್ತಾರೆ.

ಬರಹಗಾರ-ಕಲೆ-ಸಮಾಜ ಈ ಮೂರರ ಅಂತರ್‌ಸಂಬಂಧ ಕುರಿತು ತತ್ವಜ್ಞಾನಿ ಹೆಗಲ್ ಹೇಳುವ "ಕಲೆಯ ಸಾರ್ಥಕತೆ ಇರುವುದು ಅದರ ಪರಿವರ್ತನ ಶೀಲತೆಯಲ್ಲಿ ಕಲೆ ತತ್ವಜ್ಞಾನವಾಗಿ ಪರಿವರ್ತನೆಯಾಗಬೇಕು. ಅತ್ಯಂತ ಉನ್ನತ ಹಂತದ ಬೆಳವಣಿಗೆ ಇದು"[೩] ಎಂಬ ಹೇಳಿಕೆಯಿದೆ. ಇಂತಹ ಅಂತರ್‌ಸಂಬಂಧ ಬೆಳವಣಿಗೆಗಾಗಿ ಪರಿವರ್ತನೆಗಾಗಿ ಪ್ರತಿಯೊಬ್ಬ ಲೇಖಕನೂ ಹಂಬಲಿಸಬೇಕು. ಅನುಭವದ ಮೂಲಕ ಸಾಮಾಜಿಕ ಬದಲಾವಣೆಯನ್ನು ತರಬೇಕೆಂಬ ಜೀವನ ದೃಷ್ಟಿಕೋನ ವಿಸಾಜಿಯವರಲ್ಲಿ ಪ್ರಕಟವಾಗಿರುವುದನ್ನು ಕಾಣುತ್ತೇವೆ.

ನಮ್ಮ ಹಿಂದಿನ ಲೇಖಕರಿಗೆ ಅವರೆದುರು ಆಯಾ ಕಾಲದ ಆದರ್ಶಗಳಿದ್ದವು. ಪುರೋಹಿತಶಾಹಿಯನ್ನು ಧಿಕ್ಕರಿಸುವುದು ಅಸ್ಪೃಶ್ಯತೆಯನ್ನು ಮಾಡದಿರುವುದು ದೇವರು ಧರ್ಮಗಳ ಕಂದಾಚಾರ ದಾಟುವುದು. ನಗರದ ಯಾಂತ್ರಿಕ ಬದುಕಿನಿಂದ ಹೊರ ಬರುವುದು, ಸ್ವಾತಂತ್ರ್ಯಕ್ಕಾಗಿ ಸಮಾನತೆಗಾಗಿ ಹಂಬಲಿಸುವುದು ಇತ್ಯಾದಿ. ಅದೇ ರೀತಿ ಹಿಂದಿನವರ ಆದರ್ಶ ಮತ್ತು

ಮೌಲ್ಯವನ್ನು ಗುರುತಿಸಿಕೊಂಡ ಇಂದಿನ ಪ್ರಸ್ತುತ ಸಮಸ್ಯೆಗಳಾದ ಕೋಮುವಾದ, ಜಾಗತೀಕರಣ ದೇಸಿಯತೆಯ ಬಗೆಗೆ ಮನರಾಲೋಚನೆ ಮಾಡಬೇಕು. ಇದರಿಂದ ಅವರು ಜೀವನದೊಂದಿಗೆ ಸಮಾಜವನ್ನು ನೋಡುವ ಹಾಗೂ ತಿದ್ದುವ ಕಾರ್ಯವಾಗಬೇಕು. ಉದಾ:ರೈತನ ಆತ್ಮಹತ್ಯೆ, ಗುಜರಾತಿನ ಸಾವುಗಳು, ಭ್ರೂಣಹತ್ಯೆ ಪ್ರಕರಣಗಳು ಇತ್ಯಾದಿ. ನಮ್ಮ ಅಸ್ತಿತ್ವವನ್ನು ಅಣುಕಿಸದಿದ್ದರೆ ಬರಹ ಮತ್ತು ಬದುಕಿಗೆ ಅರ್ಥವಿಲ್ಲ. ಅಂತಹ ಬರಹ ಮತ್ತು ಬರವಣಿಗೆ ಮುಖ್ಯವೆಂಬುದು ಇಲ್ಲಿನ ತಾತ್ಪರ್ಯವಾಗಿದೆ.

ವಿಕ್ರಮ ವಿಸಾಜಿಯವರು 'ಹೈದ್ರಾಬಾದ್ ಕರ್ನಾಟಕದ ಹೊಸಗನ್ನಡ ಕಾವ್ಯ' ಎಂಬ ಲೇಖನದಲ್ಲಿ ಚರಿತ್ರೆಯ ಮೂಲಕ ಸಾಹಿತ್ಯವನ್ನು ಕಟ್ಟಬೇಕೆಂಬ ಮನೋಭಾವ ವ್ಯಕ್ತವಾಗಿದೆ. "ಹೈದ್ರಾಬಾದ್ ಕರ್ನಾಟಕದ ಜನ ಕನ್ನಡವನ್ನು ಉಳಿಸಿಕೊಳ್ಳಲು ಪಟ್ಟ ಕಷ್ಟ ಬೇರೆ ಯಾವ ಭಾಗದ ಜನರೂ ಪಟ್ಟಿಲ್ಲ. ಇಡೀ ರಾಷ್ಟ್ರ ಸ್ವಾತಂತ್ರದ ಸಂಭ್ರಮದಲ್ಲಿದ್ದಾಗ ಇವರಲ್ಲಿದ್ದುದು ಬರೀ ಆತಂಕ. ಹೈದ್ರಾಬಾದ್ ನಿಜಾಮನ ಕಪಿಮುಷ್ಠಿಯಲ್ಲಿ ಹಳ್ಳಿಗಳು ನಲುಗಿ ಹೋಗಿದ್ದವು. ಮುಂದೆ ಜಮೀನ್ದಾರಿ ಸಿರಿವಂತರ ನಡುವೆ ಬದುಕಿಗಾಗಿ ಅಂಗಲಾಚ ಬೇಕಿತ್ತು."[೪] ಹೀಗೆ ಒಂದು ಭಾಗದ ಜನರ ಜೀವನವನ್ನು ಚರಿತ್ರೆ ಮೂಲಕ ಅರ್ಥೈಸುವುದರೊಂದಿಗೆ ಮುಂದಿನ ತಲೆಮಾರಿನ ವಿಮರ್ಶಕರು ಲೇಖಕರು ಸಾಹಿತ್ಯವನ್ನು ಕಟ್ಟಬೇಕು. ಆ ಮೂಲಕ ಇಲ್ಲಿನ ಬದುಕನ್ನು ಪ್ರಾದೇಶಿಕ ಸತ್ವವನ್ನು ಸಾಹಿತ್ಯ ಕೃಷಿಗೆ ಬಳಸಿಕೊಂಡು ಹೊಸ ತಲೆಮಾರಿನ ವಿಮರ್ಶಕರು ಬೆಳೆಯಬೇಕೆಂಬುದು ವಿಕ್ರಮ ಅವರ ಆಶಯವಾಗಿದೆ.

ವಿಸಾಜಿಯವರ ಅಭಿಪ್ರಾಯದಂತೆ ಗಿರೀಶ್ ಕಾರ್ನಾಡರ ನಾಟಕಗಳು ಧರ್ಮ, ರಾಜಕಾರಣ, ಮನುಷ್ಯ ಸಂಬಂಧಗಳ ಕುರಿತು ಇದುವರೆಗೂ ಕನ್ನಡದಲ್ಲಿ ನಡೆದ ಚರ್ಚೆಗಳನ್ನು ಸೂಕ್ಷ್ಮಗೊಳಿಸಿವೆ. ಚರಿತ್ರೆ, ಪುರಾಣ, ಜನಪದದ ಮೂಲಕ ಹೊಸ ಸಮಾಜವನ್ನು ನಾಟಕಗಳ ಮೂಲಕ ಅವರು ಪರಿಚಯಿಸುವರು. ಇಂತಹ ಸೃಜನಶೀಲ ನಾಟಕಕಾರ ಚರಿತ್ರೆ, ಪುರಾಣದ ಮೂಲಕ ಸಮಾಜದಲ್ಲಿ ನಡೆಯುವ ಹುನ್ನಾರಗಳನ್ನು ನಾಟಕದ ಮೂಲಕ ಬಯಲು ಮಾಡುವರು. ಹೀಗೆ ಸಮಾಜವನ್ನು ಚಿಕಿತ್ಸಕ ನೆಲೆಯಲ್ಲಿ ಗ್ರಹಿಸುವ, ಸಂಬಂಧಗಳನ್ನು ಸಂಸ್ಕೃತಿಯ ಮೂಲಕವೇ ಕಟ್ಟಿಕೊಡುವ ಗಿರೀಶ್ ಕಾರ್ನಾಡರ ಬರವಣಿಗೆ ಅವರಿಗೆ ಆಪ್ತವಾದರೆ, ಏನನ್ನು ಕಟ್ಟಿಕೊಡದ ವಾಸ್ತವ ಸಮಸ್ಯೆಯನ್ನು ಗುರುತಿಸದ ಬರವಣಿಗೆ ಅವರಿಗೆ ಆಪ್ತವಾಗುವುದಿಲ್ಲ.

### ೪.೨: ಬಿ.ಎಂ ಪುಟ್ಟಯ್ಯ : ಲೋಕದೃಷ್ಟಿ

ಪುಟ್ಟಯ್ಯರವರು 'ಕದಡು' ಕೃತಿಯಲ್ಲಿನ 'ಹರಿಶ್ಚಂದ್ರ ಚಾರಿತ್ರ : ಸತ್ಯದ ನಿರೂಪಣೆ ಮತ್ತು ನಿಲುವಿನ ಸಮಸ್ಯೆ' ಲೇಖನದ ಮೂಲಕ ಅಧಿಕಾರಶಾಹಿವರ್ಗ ಸತ್ಯವನ್ನು ಹೇಗೆ

ಬಿಂಬಿಸುತ್ತದೆ ಎಂದು ಹೇಳುತ್ತಾರೆ. "ಸತ್ಯ ಎಂಬುದು ಹರಿಶ್ಚಂದ್ರ ಎಂಬ ವ್ಯಕ್ತಿಯೊಬ್ಬನ ಮೂಲಕ ಜಾರಿಯಾಗುತ್ತದೆ. ಅವರು ನಡೆದುಕೊಂಡಂತೆಯೇ ಉಳಿದವರೆಲ್ಲ ನಡೆಯಬೇಕು ಎಂಬ ಆದರ್ಶವನ್ನು 'ಹರಿಶ್ಚಂದ್ರ ಚಾರಿತ್ರ' ಓದುಗರ ಮುಂದಿಡಲು ಪ್ರಯತ್ನಿಸುತ್ತಿದೆ. 'ಸತ್ಯ' ಎಂಬುದನ್ನು ಭಾಷಿಕವಾದ ಮತ್ತು ಆಚರಣಾತ್ಮಕವಾದ ಸಿದ್ಧರೂಪವೂ? ಅಥವಾ ಸಮಾಜದ ಬೇರೆ ಬೇರೆ ಸಮುದಾಯಗಳು ವರ್ಗಗಳು ತಮ್ಮ ಎಲ್ಲಾ ಬಗೆಯ ಹಿತಾಸಕ್ತಿಗಳಿಗೆ ಪೂರಕವಾಗಿ ತಮ್ಮ ತಮ್ಮ ಚಾರಿತ್ರಿಕ ಒತ್ತಡಗಳಿಗೆ ಅನುಗುಣವಾಗಿ ಸತ್ಯ ಎಂಬುದು ನಿರಂತರವಾಗಿ ರೂಪಿಸಿಕೊಳ್ಳುತ್ತಿರುತ್ತವೊ ಎಂಬ ಪ್ರಶ್ನೆ ನಮಗೆ ಮುಖ್ಯವಾಗಿದೆ"[3] ಎಂಬ ಪ್ರಶ್ನೆಯನ್ನು ಪುಟ್ಟಯ್ಯ ಎತ್ತುತ್ತಾರೆ.

ಹೀಗೆ ಪುರಾಣದ ವ್ಯಕ್ತಿಯೊಬ್ಬನ ಹೆಸರಿಗೆ ಸತ್ಯವೆಂಬ ಮೌಲ್ಯ ವಿಶೇಷಣ ಸೇರಿಸಿ ಸತ್ಯದ ಪ್ರತಿರೂಪ ಸತ್ಯ ಹರಿಶ್ಚಂದ್ರನೇ ಎಂದು ರೂಪಿಸಿರು ಕ್ರಮವನ್ನು ಪುಟ್ಟಯ್ಯನವರು ಟೀಕಿಸುತ್ತಾರೆ. ಪ್ರತಿಯೊಂದು ಸಮುದಾಯ, ವರ್ಗಗಳು ಸಹ ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ಹಾಗೂ ಚಾರಿತ್ರಿಕ ಒತ್ತಡಗಳಿಗೆ ಅನುಗುಣವಾಗಿ ಸತ್ಯವನ್ನು ನಿರಂತರವಾಗಿ ರೂಪಿಸಿಕೊಳ್ಳುತ್ತಿರುತ್ತಾರೆ. ಎಂಬುದು ಅವರ ಅಭಿಪ್ರಾಯವಾಗಿದೆ. ಆಧುನಿಕ ಭಾರತದಲ್ಲಿ 'ಅಹಿಂಸೆ' ಎಂಬ ಪರಿಕಲ್ಪನೆಗೆ ಗಾಂಧಿಯ ಹೆಸರನ್ನು ಇದೇ ರೀತಿ ಸಮೀಕರಿಸಲಾಗಿದೆ. ಸತ್ಯವೆಂಬುದು ಅಖಂಡವಾದದು. ಸಾರ್ವತ್ರಿಕ ಮತ್ತು ಸರ್ವಕಾಲಿಕವಾದುದು ಎಂಬುದಾಗಿ ಬಿಂಬಿಸಲಾಗಿದೆ. ಹೀಗೆ ನಂಬಲಾಗಿರುವ ಕ್ರಮವನ್ನು ಪುಟ್ಟಯ್ಯ ಅವರು ತಿರಸ್ಕರಿಸುವರು. ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಶ್ರೇಣೀಕರಣಗಳಿರುವ ವ್ಯವಸ್ಥೆಯಲ್ಲಿ ಒಂದು ಸಂಗತಿ ಅಖಂಡವಾಗಿರಲು ಸಾಧ್ಯವಿಲ್ಲವೆಂಬುದು ಅವರ ನಿಲುವಾಗಿದೆ. ರಾಘವಾಂಕನ 'ಹರಿಶ್ಚಂದ್ರ ಚಾರಿತ್ರ'ದಲ್ಲಿ ಎಂತಹ ಸತ್ಯ, ಯಾರ ಪರವಾದ ಸತ್ಯ, ಯಾರ ಹಿತಾಶಕ್ತಿಯ ಸತ್ಯ ಪ್ರತಿಪಾದಿಸಿದೆ ಎಂಬುದರ ವಿಸ್ತೃತ ನೆಲೆಯ ಹುಡುಕಾಟವನ್ನು ಅವರು ಮಾಡುತ್ತಾರೆ.

'ಹರಿಶ್ವಂದ್ರ ಚಾರಿತ್ರ'ವು ದೇವಲೋಕ ಪುರಾಣ, ಸಾಮಂತಶಾಹಿ ಮತ್ತು ಊಳಿಗಮಾನ್ಯ ಶಾಹಿ ಇವುಗಳ ಕಥನವನ್ನು ಬೆರಸಿ ಹೇಳಲು ಪ್ರಯತ್ನಿಸಿದೆ ಎಂದು ಪುಟ್ಟಯ್ಯ ಅವರು ಹೇಳುತ್ತಾರೆ. ಪಾತ್ರಗಳ ಮೂಲಕ ಕೃತಿಯೊಳಗಿನ ಜಗತ್ತನ್ನು ಓದುಗ ವಲಯಕ್ಕೆ ಪುಟ್ಟಯ್ಯ ಪರಿಚಯಿಸುತ್ತಾರೆ. ಕುಲದ ಪ್ರಶ್ನೆ ಪುರುಷ ಪ್ರಧಾನ ವ್ಯವಸ್ಥೆ ಮುಂತಾದ ನೆಲೆಗಳನ್ನು ಈ ಹೊತ್ತಿನ ಸಮಾಜದಲ್ಲಿಟ್ಟು ನೋಡುವ ಅವರ ಕ್ರಮವು ವಿಶಿಷ್ಟವಾಗಿದೆ. ಮೇಲ್ವರ್ಗದ ವ್ಯವಸ್ಥೆಯು ಕೆಳವರ್ಗದ ವ್ಯವಸ್ಥೆಯನ್ನು ಅಲ್ಲಿನ ಜೀವನ ವಿಧಾನವನ್ನು ಗ್ರಹಿಸದೆ ಇರುವ ಅವರಿಗೆ ಕೃತಿಯ ನಿಲುವಿನ ಬಗೆಗೆ ಸಮ್ಮತಿಯಿಲ್ಲ. ಮುಂದಿನ ವಿಮರ್ಶಕರು ಕೃತಿಗಳನ್ನು ಸೂಕ್ಷ್ಮವಾಗಿ

ಗ್ರಹಿಸಬೇಕಾಗಿರುವ ತುರ್ತನ್ನು ಅವರು 'ಹರಿಶ್ಚಂದ್ರ ಚಾರಿತ್ರ : ಸತ್ಯದ ನಿರೂಪಣೆ ಮತ್ತು ನಿಲುವಿನ ಸಮಸ್ಯೆ' ಲೇಖನದ ಉದ್ದಕ್ಕೂ ವ್ಯಕ್ತಪಡಿಸಿದ್ದಾರೆ.

"ವಿಶ್ವಾಮಿತ್ರನಿಗೆ ರಾಜ್ಯ ಮುಖ್ಯ ಅಲ್ಲವೆ ಅಲ್ಲ. ಜಾತಿಸಂಕರ ಮುಖ್ಯ. ಹರಿಶ್ಚಂದ್ರನಿಗೆ ಜಾತಿಸಂಕರ ಎಂದರೆ ತನ್ನ ಎಲ್ಲ ಬಗೆಯ ಅವಸಾನ ಮತ್ತು ಅಧೋಗತಿ ಕೊನೆಗೆ ತನ್ನ ವ್ಯಕ್ತಿತ್ವದ ನಾಶ"[೬] ಈ ರೀತಿ ಹರಿಶ್ಚಂದ್ರ ಚಾರಿತ್ರ ಸಾಮಾಜಿಕ ಶ್ರೇಣೀಕರಣದಲ್ಲಿ ಜಾತಿಸಂಕರ ಮತ್ತು ರಾಜ್ಯಾಧಿಕಾರದ ದಾಹವನ್ನು ಎದುರು ಬದುರು ಮಾಡಿ ಅವರು ವ್ಯವಸ್ಥೆಯ ಬಗ್ಗೆ ಪ್ರಶ್ನೆ ಮಾಡುವರು. ಜಾತಿ ಶ್ರೇಣೀಕರಣದ ಚೌಕಟ್ಟುಗಳನ್ನು ಮುರಿಯಬೇಕು. ಆದರೆ ಅದೇ ಕಾಲಕ್ಕೆ ರಾಜ್ಯ ವ್ಯವಸ್ಥೆಯು ಸಮಗ್ರವಾಗಿ ಬದಲಾಗಬೇಕು. ಒಂದು ಕೃತಿಯ ಮೂಲಕ ಸಾಮಾಜಿಕ ವ್ಯವಸ್ಥೆಯೊಂದನ್ನು ಮುರಿದು ಕಟ್ಟುವ ಮೂಲಕ ವರ್ತಮಾನದ ಕಡೆ ಯೋಚಿಸುವಂತೆ ಮಾಡುವ ಅವರ ನಿಲುವು ಇಲ್ಲಿ ವ್ಯಕ್ತವಾಗಿದೆ. ಇಂದಿಗೂ ನಮ್ಮಲ್ಲಿ ಮೇಲು-ಕೀಳು ಎಂಬ ಮನೋಭಾವ ಇರುವುದನ್ನು ಕೃತಿಯ ಮೂಲಕ ಪ್ರಸ್ತುತ ಸನ್ನಿವೇಶಕ್ಕೆ ಸಮೀಕರಿಸಿ ಹೇಳುವ ಅವರ ಮನೋಭಾವ ಭಿನ್ನವಾಗಿದೆ.

ಪ್ರಭುತ್ವವು ತನಗೆ ಎದುರಾದ ಸಮಸ್ಯೆಗಳನ್ನು ತಾನು ಬಿಡಿಸಿಕೊಳ್ಳುವ ಭಾಗವಾಗಿ ತಾನು ನವೀಕರಣ ಮಾಡಿಕೊಳ್ಳುವ ಹುನ್ನಾರದ ಸೂಕ್ಷ್ಮಗಳು ಕಾವ್ಯದಲ್ಲಿ ಸೂಕ್ಷ್ಮವಾಗಿ ವ್ಯಕ್ತವಾಗಿರುವುದನ್ನು ಅವರು ಗುರುತಿಸಿದ್ದಾರೆ. ರಾಜನ ಸತ್ಯ, ರಾಜತ್ವದ ಸತ್ಯಗಳೇ ಪ್ರಧಾನವೆಂದು ತೋರಿಸುವ ಕವಿಯ ಕ್ರಮವನ್ನು ಅವರು ಒಪ್ಪುವುದಿಲ್ಲ. ಒಂದು ರೀತಿಯಲ್ಲಿ ಅಮೇರಿಕಾದಲ್ಲಿ ನಡೆದ ಸಪ್ಟೆಂಬರ್ ೧೧ರ ಘಟನೆಯನ್ನು ಇಡೀ ಜಗತ್ತಿನ ಜನರ ಸಮಸ್ಯೆ ಎಂದು ಅಮೇರಿಕವು ಬಿಂಬಿಸಿದ ಕ್ರಮ ಇದು. ಅಮೇರಿಕಾ ಮಾತ್ರವಲ್ಲ, ಯಾವುದೇ ದೇಶದ ಆಳುವ ವರ್ಗ ತನಗಾದ ನಷ್ಟವನ್ನು ಜನತೆಯ ನಷ್ಟವೆಂದು ಬಿಂಬಿಸಲು ಪ್ರಯತ್ನಿಸುತ್ತದೆ. ಈ ರೀತಿಯ ಮೇಲ್ವರ್ಗದ ದಬ್ಬಾಳಿಕೆಯ ಕ್ರಮವನ್ನು ಕೃತಿಯೊಳಗೆ ಗುರುತಿಸಿ ಅದನ್ನು ಅವರು ಅಲ್ಲಗಳೆಯುತ್ತಾರೆ. ಕೆಳವರ್ಗದವರ ಬದುಕನ್ನು ಮುಚ್ಚಿಡುವ ವ್ಯವಸ್ಥೆಯ ವಿರುದ್ಧ ಅವರಿಗೆ ಆಕ್ರೋಶವಿದೆ. ನಿಜವಾದ ಕೃತಿಕಾರನಿಗೆ ಕೇವಲ ರಾಜನ ಬದುಕೇ ಮುಖ್ಯವಾಗಬಾರದು. ಸಾಮಾನ್ಯ ಜನರ ಬದುಕು ಮುಖ್ಯವಾಗಬೇಕು. ರಾಜನ ಸಮಸ್ಯೆಗಳೇ ಜನರ ಸಮಸ್ಯೆಗಳು ಎಂದು ಬಿಂಬಿಸುವ ಕೃತಿಗಳು ಪುಟ್ಟಯ್ಯ ಅವರಿಗೆ ಮಹತ್ವದ್ದು ಎನಿಸುವುದಿಲ್ಲ.

ಹೊಲೆಯರ ಬದುಕನ್ನು ತಾತ್ಸಾರವಾಗಿ ನೋಡುವ ಮೇಲ್ವರ್ಗದವರ ಕ್ರಮವನ್ನು ಅವರು ವಿರೋಧಿಸುತ್ತಾರೆ. ಅಂದಿನಿಂದ ಇಂದಿನವರೆಗೂ ಈ ರೀತಿಯಾಗಿ ನೋಡುವ ಜನರ ಕ್ರಮವನ್ನು ಬದಲಾಯಿಸುವ ಅನಿವಾರ್ಯತೆಯನ್ನು ಅವರು ಹೇಳುತ್ತಾರೆ. ಊಳಿಗಮಾನ್ಯಶಾಹಿಯು

ಜಾತಿ ಮತ್ತು ಕುಲಗಳನ್ನು ಗಟ್ಟಿಗೊಳಿಸುವ ಒಂದು ಆಯಾಮ: ಅದೇ ಕಾಲಕ್ಕೆ ಅವು ಸಂಕರಗೊಳ್ಳಬಹುದಾಗಿದ್ದ ಪರಿಸ್ಥಿಯ ಒಳ ಒತ್ತಡದ ಸೂಕ್ಷ್ಮಗಳ ಇನ್ನೊಂದು ಆಯಾಮಗಳು ಕಾವ್ಯದಲ್ಲಿ ಸಂಘರ್ಷಾತ್ಮಕವಾಗಿ ಚಲನಶೀಲಗೊಳಿಸುವ ಕ್ರಮವನ್ನು ಅವರು ಗುರುತಿಸುತ್ತಾರೆ.

ಸಾಮಾಜಿಕ ಶ್ರೇಣೀಕರಣಗಳ ನೆಲೆಯಲ್ಲಿ ಭಿನ್ನ ಭಿನ್ನ ಓದುಗರಿಗೆ ಸಾಹಿತ್ಯ ಕೃತಿಯ ಓದಿನಿಂದ ದಕ್ಕುವ ವಿಭಿನ್ನ ದೃಷ್ಟಿಕೋನಗಳನ್ನು ಮಂಡಿಸುವ ಕ್ರಮದ ಕಡೆಗೆ ಗಮನ ಹರಿಸಬೇಕೆಂದು ಅವರು ಹೇಳುವರು.

"ಕರ್ನಾಟಕದಲ್ಲಿ ಕೋಮುವಾದಿ ರಾಜಕೀಯ ಪಕ್ಷ ಆಡಳಿತಕ್ಕೆ ಬರಬಾರದು ಎಂಬ ಗುರಿಯನ್ನಿಟ್ಟುಕೊಂಡು ಭೂ ಮಾಲೀಕರ ರಾಜಕೀಯ ಪಕ್ಷಗಳು, ದಲಿತರು, ಅಲ್ಪಸಂಖ್ಯಾತರು ಮತ್ತು ಮಹಿಳೆಯರನ್ನ ತಮ್ಮ ಕಡೆಗೆ ಎಳೆಯುವ ಹರಸಾಹಸ ಮಾಡುತ್ತಿವೆ"[೬] ಎನ್ನುವ ಪುಟ್ಟಯ್ಯನವರು ದಲಿತರು ಮತ್ತು ಮಹಿಳೆಯರಿಗೆ ಕೋಮುವಾದಿ ರಾಜಕೀಯ ಪಕ್ಷ ಹೇಗೆ ಅಪಾಯ ಕಾರಿಯೋ, ಅದೇ ರೀತಿಯಲ್ಲಿ ಅದನ್ನು ವಿರೋಧಿಸುತ್ತಿರುವ ಭೂಮಾಲೀಕರ ರಾಜಕೀಯ ಪಕ್ಷಗಳು ಕೂಡ ಅಷ್ಟೇ ಅಪಾಯಕಾರಿ ಎಂಬುದಾಗಿ ಹೇಳುತ್ತಾರೆ. ಭೂಮಾಲೀಕರು ತಮ್ಮ ಭೂ-ಹಿತಾಸಕ್ತಿಗೋಸ್ಕರ ದಲಿತರು ಮತ್ತು ಮಹಿಳೆಯರನ್ನು ಕೋಮುವಾದಿ ರಾಜಕೀಯ ಪಕ್ಷದ ವಿರುದ್ಧ ಎತ್ತಿ ಕಟ್ಟುವ ಜನರನ್ನು ಅವರು ವಿರೋಧಿಸುತ್ತಾರೆ. ತಮ್ಮ ವರ್ಗ ಹಿತಾಸಕ್ತಿ ಹಾಗೂ ಗುರಿಗಾಗಿ ಇವರನ್ನು ಅಸಾಮತ್ತಾಗಿ ದುರುಪಯೋಗ ಪಡಿಸಿಕೊಳ್ಳುತ್ತಿರುವ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಅರಿಯಬೇಕಾಗಿರುವುದು ಅಗತ್ಯವೆಂಬ ಅವರ ದಲಿತರ ಮನಸ್ಸಿನ ಆಶಯವಾಗಿದೆ.

"ದಲಿತರಲ್ಲೇ ಶ್ರೀಮಂತರು, ರಾಜಕಾರಣಿಗಳು, ದಲಿತ ಅಧಿಕಾರಿಗಳು ಬೆಂಗಳೂರಲ್ಲೇ ನೆಲೆಯೂರಿರುವ ವಾಸ್ತವ ಒಂದು ಕಡೆಗಿದೆ. "ಈ ಗುಲಾಬಿನಗರದಾಗ ಗುಡಿಸಲು ಯಾಕಂತ ಬ್ಯಾಡೆಂದು ಬೆಂಗಳೂರು ದಬ್ಬಿತಲ್ಲ"[೭] ಎಂಬ ಆರ್. ಮಾನಸಯ್ಯನವರ ಹೋರಾಟದ ಹಾಡು ಮತ್ತೊಂದು ಕಡೆಗಿದೆ

ಹೀಗೆ ಇಂದು ದಲಿತ ಶ್ರೀಮಂತರು ಕೆಳ ಸ್ತರದಲ್ಲಿರುವ ದಲಿತರನ್ನು ಶೋಷಣೆ ಮಾಡುತ್ತಿರುವ ವ್ಯವಸ್ಥೆಯ ವಿರುದ್ಧ ಪುಟ್ಟಯ್ಯನವರು ಧ್ವನಿ ಎತ್ತುತ್ತಾ ದಲಿತರೇ ದಲಿತ ವಿರೋಧಿಗಳಾಗಿ ಮುಂದೇ ಅದೇ ಹಾಡಾಗಿ ಹೊರ ಬರುತ್ತಿರುವ ಸಂದರ್ಭವನ್ನೇ ಅವರು ಟೀಕಿಸುತ್ತಾರೆ. ಒಂದು ಕುಟುಂಬವನ್ನು ರಕ್ಷಿಸಬೇಕಾದ ಒಡೆಯನೇ ಭಕ್ಷಕನಾದರೆ! ಹಾಗೆಯೇ ದಲಿತ ಸ್ಥಿತಿಯಾಗಿದೆಯೆಂದು ಅವರು ಹೇಳುತ್ತಾರೆ. ಸಿರಿವಂತರಾಗಿರುವ ದಲಿತರು ಕಳಸ್ತರದಲ್ಲಿರುವ ದಲಿತರನ್ನು ಕಡೆಗಾಣಿಸುತ್ತಿರುವುದನ್ನು ಅವರು ವಿರೋಧಿಸುವರು. ಬಡದಲಿತ ವರ್ಗದ ಪರ ಕೆಲಸ ಮಡುವ ಶ್ರೀಮಂತರು, ರಾಜಕಾರಣಿಗಳು, ಅಧಿಕಾರಿಗಳು ಅವರಿಗೆ ಇಷ್ಟವಾಗುವರು.

ಪ್ರಸ್ತುತ ಸಂದರ್ಭದಲ್ಲೂ ಅನೇಕ ಸಾಹಿತಿಗಳು ರಾಜಕಾರಣಿಗಳೂ ಅಧಿಕಾರಿಗಳೂ ದಲಿತ ನೆಲೆಯಿಂದಲೇ ಮೇಲೆ ಬಂದಿದ್ದಾರೆ. ಆದರೇ ಇಂದು ಅವರೇ ಅವರಿಗಿಂತ ಕೆಳಸ್ತರದಲ್ಲಿರುವ ದಲಿತರನ್ನು ಮರೆತಿರುವುದು ವಿಪರ್ಯಾಸದ ಸಂಗತಿಯಾಗಿದೆ ಎಂದೆನಿಸಿದೆ ಲೇಖಕರಿಗೆ.

**೪.೩. ಜೋಗಿ : ಲೋಕದೃಷ್ಟಿ**

ಜೋಗಿಯವರು ಕೆಲವೊಬ್ಬ ಲೇಖಕರ ಸೂಕ್ಷ್ಮ ಮನಸ್ಸನ್ನು ಅರ್ಥ ಮಾಡಿಕೊಳ್ಳುವಲ್ಲಿ ಯಶಸ್ವಿಯಾಗಿರುವಂತೆ ಕಾಣುತ್ತದೆ. ಕುವೆಂಪು ಕನ್ನಡದ ಒಬ್ಬ ದೊಡ್ಡ ಸಾಹಿತಿಯಾದರೂ ಹೋಗುವೆನು ನಾ ಮಲೆನಾಡಿಗೆ ಎಂದು ಹೇಳುತ್ತಲೇ ಮೈಸೂರಿನಲ್ಲೆ ಉಳಿದುಕೊಂಡರು. ಆದರೆ ಅವರ ಮಗ ಪೂರ್ಣ ಚಂದ್ರ ತೇಜಸ್ವಿಗೆ ಬೆಂಗಳೂರಿನ ಕ್ಯೂಗಟ್ಟಳೆಯ ರಸ್ತೆ ಬಾಳಿಗಿಂತ ಮೂಡಿಗೆರೆ ಹ್ಯಾಂಡ್ ಪೋಸ್ಟಿನ ತಿರುವುಗಳೇ ಹಿತವಾದವು. ಜೋಗಿಯವರಿಗೆ ಈ ಕಾರಣದಿಂದಲೇ ಕುವೆಂಪು ಅವರಿಗಿಂತ ತೇಜಸ್ವಿ ಆಪ್ತವಾಗುತ್ತಾರೆ. ಇಂದು ಎಷ್ಟೋ ಸಾಹಿತಿಗಳು ಹಳ್ಳಿಗಳಿಂದ ನಗರ ಜೀವನ ಬಯಸಿ ಪಟ್ಟಣಕ್ಕೆ ಸೇರುತ್ತಿದ್ದಾರೆ. ಆದರೆ ತೇಜಸ್ವಿ ಮಾತ್ರ ನಗರ ಜೀವನದಿಂದ ದೂರ ಉಳಿದಿದ್ದಾರೆ. ಮೂಡಿಗೆರೆಯಲ್ಲಿ ಕಾಫಿಯನ್ನು ಬೆಳೆಯುತ್ತಾ ಕರಿಮೋಡ ಯಾವಾಗ ನೆಲಕ್ಕೆ ಸೇತುವೆ ಕಟ್ಟುತ್ತದೋ ಎನ್ನುತ್ತಲೆ ಆ ಭಾಗದ ಜನರ ಬದುಕನ್ನು ಕೃತಿಯಲ್ಲಿ ಅವರು ಹಿಡಿದಿಟ್ಟರು. ಇಂತಹ ಬರಹಗಾರರ ಮೂಲಕ ನೈತಿಕ ಮೌಲ್ಯಗಳನ್ನು ಹೊಸ ತಲೆಮಾರಿಗೆ ಪರಿಚಯಿಸಿ ಕೊಡುವುದರ ಮೂಲಕ, ಬದಲಾವಣೆಯ ಚಿಂತನೆ ಹುಟ್ಟಿಸುವುದು ಜೋಗಿಯವರ ಸಮಾಜಮುಖಿ ದೃಷ್ಟಿಕೋನದ ಆಶಯವಾಗಿದೆ.

ಜೋಗಿ ಜೀವನ ಮತ್ತು ಸಮಾಜವನ್ನು ಕುರಿತು ಇತರ ಲೇಖಕರ ತಾತ್ವಿಕತೆಯೊಂದಿಗೆ ತೇಜಸ್ವಿಯವರನ್ನು ವಿಶ್ಲೇಷಿಸುತ್ತಾರೆ. " ಲಂಕೇಶ್ ಉಡಾಫೆಯಿಂದ, ಅನಂತಮೂರ್ತಿ ರೂಪಕದಿಂದ, ಮಾಸ್ತಿ ಜೀವನ ಪ್ರೀತಿಯಿಂದ, ಬೇಂದ್ರೆ ಮರುಳುತನದಿಂದ, ಕಾರಂತರು ಸಿಟ್ಟಿನಿಂದ ಇಷ್ಟವಾಗಬಹುದು. ಆದರೆ ತೇಜಸ್ವಿ ಕಾಡಿನಂತೆ ಇಷ್ಟವಾಗುತ್ತಾರೆ"[*] ಎಂದು ಅವರು ಬರೆಯುತ್ತಾರೆ. ಹೀಗೆ ಸಾಮಾನ್ಯವಾಗಿ ಕೃತಿಯಷ್ಟೇ ಕೃತಿಕಾರನೂ ಆಪ್ತವಾಗುವುದು ಅಪರೂಪ. ಆದರೆ ತೇಜಸ್ವಿ ಈ ಎರಡು ಗುಣಗಳನ್ನು ಹೊಂದಿರುವುದರಿಂದಲೇ ಅವರಿಗೆ ತೇಜಸ್ವಿ ಹತ್ತಿರವಾಗಿದ್ದಾರೆ. ಸಮಾಜವನ್ನು ಅದರಲ್ಲಿನ ಸಮಸ್ಯೆ, ಜನರ ಬದುಕನ್ನು ಸಾಹಿತ್ಯದ ಮೂಲಕ ಕಟ್ಟಿಕೊಡುವ ಲೇಖಕರು ಅವರಿಗೆ ಮುಖ್ಯವಾಗುತ್ತಾರೆ.

ಜೋಗಿಯವರು ನಮ್ಮ ನಾಡಿನ ಕೆಲವು ಸಾಹಿತಿಗಳ ಕುರಿತು ಹೀಗೆ ಹೇಳುತ್ತಾರೆ. ಕೆಲವು ಸಾಹಿತಿಗಳು ಪ್ರತಿಷ್ಠೆ ಪ್ರಶಸ್ತಿ, ರಾಜಕೀಯದ ಹಿಂದೆ ಬಿದ್ದು ರಾಜಕಾರಣಿಗಳ ಹಿಂದೆ ಸುತ್ತುತ್ತಾರೆ. ಅದನ್ನು ಪಡೆಯಲು ನಾನಾತರದ ಕಸರತ್ತುಗಳನ್ನು ಮಾಡುತ್ತಾರೆ. ಒಬ್ಬರಿಗೆ

ಮಾದರಿಯಾಗಬೇಕಾದ ಸಾಹಿತಿಗಳು ಪ್ರಶಸ್ತಿಯ ಹಿಂದೆ ಬಿದ್ದು ತಮ್ಮ ನೈತಿಕ ಮೌಲ್ಯವನ್ನು ಮರೆಯುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಇವೆಲ್ಲವುಗಳಿಂದ ದೂರು ಉಳಿದು ಬದುಕುವ ಕಲೆಯನ್ನು ಕಂಡಿರುವ ನಿಸ್ವಾರ್ಥ ಮನಸ್ಸಿನ ತೇಜಸ್ವಿಯವರು ಜೋಗಿಯಂತಹ ಅನೇಕ ಜನರಿಗೆ ಇಷ್ಟವಾಗುತ್ತಾರೆ. ಬದ್ಧತೆ ಇರುವವರು ಮಾತ್ರ ಹೆಚ್ಚು ಕಾಲ ಜೀವಂತವಾಗಿ ಸಮಾಜದಲ್ಲಿ ತೊಡಗಿಕೊಳ್ಳಲು ಸಾಧ್ಯವಾಗುತ್ತದೆ. ಜೋಗಿ ಹೇಳುವಂತೆ ತೇಜಸ್ವಿಯವರು ಸಾಹಿತ್ಯದ ಹಿಂದೆ ಬಿದ್ದವರೇ ಹೊರತು ಪ್ರಶಸ್ತಿ, ಅಧಿಕಾರ, ಹಣದ ಹಿಂದೆ ಬಿದ್ದವರಲ್ಲ ಇಂತಹ ಮನಸ್ಥಿತಿಯ ಲೇಖಕರು ಮತ್ತಷ್ಟು ಅವರಿಗೆ ಆಪ್ತರಾಗುತ್ತಾರೆ.

ಜೋಗಿಯವರು 'ಪತ್ರಕರ್ತರಾಗುವ ಹುಮ್ಮಸ್ಸಿನ ಹುಡುಗ ಹುಡುಗಿಯರಿಗೆ' ಎಂಬ ಲೇಖನದಲ್ಲಿ ಪತ್ರಿಕೋದ್ಯಮಕ್ಕೆ ಪ್ರವೇಶ ಮಾಡುವ ಪತ್ರಕರ್ತರು ಹೇಗಿರಬೇಕೆಂದು ವಿಶ್ಲೇಷಿಸುವರು. ಇಂದು ಒಬ್ಬ ರಾಜಕಾರಣಿ, ಸಿನಿಮಾ ನಟ ತೀರಿಕೊಂಡರೆ ನಾಲ್ಕೈದು ಪೋಟೋಗಳನ್ನು ಹಿಂಬಾಲಕರ ಸಂತಾಪದ ನುಡಿಗಳ ಮೂಲಕ ಪ್ರಕಟಿಸಿ ಬಿಡುತ್ತಾರೆ. ಆದರೆ ರಾಜಕಾರಣಿ ಅಥವಾ ಸಿನಿಮಾ ನಟ ಅಲ್ಲದ ವ್ಯಕ್ತಿ ತೀರಿಕೊಂಡರೆ ಸಮಸ್ಯೆ ಎದುರಾಗುತ್ತದೆ. ಉದಾ: ನಿಟ್ಟೂರು ಶ್ರೀನಿವಾಸರಾವ್, ಕೆ.ಎಸ್.ನರಸಿಂಹಸ್ವಾಮಿ, ಶಂಕರ ಮೊಕಾಶಿ ಪುಣೇಕರ ಇವರ ಕುರಿತು ಒಳನೋಟಗಳಿರುವ ವರದಿಗಳು ಪ್ರಕಟವಾಗುವುದಿಲ್ಲ. ಹೀಗಾಗಿಯೇ ಸಾಂಸ್ಕೃತಿಕ, ಮತ್ತು ರಂಗ ಭೂಮಿಯ ಬಗ್ಗೆ ತಿಳಿದುಕೊಂಡಿರುವ ಪತ್ರಕರ್ತರ ಸಂಖ್ಯೆ ಕಡಿಮೆಯಾಗಿದೆ. ಅದಕ್ಕೆ ಯುವ ಮನಸ್ಸಿನ ಪತ್ರಕರ್ತರು ಈ ನಿಟ್ಟಿನಲ್ಲಿ ತಮ್ಮ ಬರವಣಿಗೆಗಳನ್ನು ಉತ್ತಮ ಪಡಿಸಿಕೊಳ್ಳಬೇಕು ಎಂದು ಅವರು ಬಯಸುತ್ತಾರೆ.

"ಪತ್ರಕರ್ತರಾಗುವ ಮುನ್ನ ಇಡೀ ಜಗತ್ತನ್ನು ನಿಮ್ಮೊಳಗೆ ಆವಾಹಿಸಿಕೊಳ್ಳಿ ಇಡೀ ಜಗತ್ತಿನ ಗೊಡವೆ ಮರೆತು ಬಿಡಿ ಮನೆ ಗೆಸ್ಟ್‌ಹೌಸ್ ಆಗಲಿ ಅದು ಸಾಧ್ಯವಾಗದೆ ಹೋದಾಗ ಪತ್ರಕರ್ತರಾಗುವುದಿಲ್ಲ ಗುಮಾಸ್ತರಾಗುತ್ತೀರಿ!"[೧೦] ಎಂಬ ಜೋಗಿಯವರ ಮಾತು ಅಕ್ಷರಶಃ ಸತ್ಯವೆಂದು ತೋರುತ್ತದೆ. ನಿಜವಾದ ಪತ್ರಕರ್ತ ಪತ್ರಿಕೆ ಮತ್ತು ಮನೆ ಎಂದು ಉಳಿದು ಕೊಳ್ಳದೆ ಸಮಾಜ ಮುಖಿಯಾಗಿ ಆಲೋಚನೆ ಮಾಡುತ್ತಿರಬೇಕು; ಆಧುನಿಕತೆ ಕೋಮುವಾದ, ವರ್ಗಜಾತಿ ಸಮಸ್ಯೆ ಜಾಗತೀಕರಣ ಬಡತನ ಮುಂತಾದ ಎಲ್ಲಾ ವಿಷಯಗಳನ್ನು ತುಲನೆ ಮೂಲಕ ಮೌಲ್ಯವನ್ನು ಬರವಣಿಗೆಯ ಮೂಲಕ ಕಟ್ಟಿಕೊಡಬೇಕು ಎಂದು ಜೋಗಿ ಸೂಚಿಸುತ್ತಾರೆ. ಜಗತ್ತಿಗೆ ತಮ್ಮನ್ನು ತೆರೆದುಕೊಳ್ಳದೆ ಇರುವ ಪತ್ರಕರ್ತರನ್ನು ಜೋಗಿಯವರು ಇಷ್ಟಪಡುವುದಿಲ್ಲ. ಯಾರು ಸಮಾಜದಲ್ಲಿನ ಜನಸಾಮಾನ್ಯರ ಕುರಿತು ಆಲೋಚಿಸುತ್ತಾ ರಾಜಕೀಯ ಭ್ರಷ್ಟಾಚಾರವನ್ನು ಬಯಲು ಮಾಡುವ ಧೈರ್ಯ ತೋರಿಸುತ್ತಾನೋ ಅವನೇ ನಿಜವಾದ ಪತ್ರಕರ್ತರೆಂದು ಅವರು ಹೇಳುತ್ತಾರೆ. ಇದನ್ನು ಮಾಡದೇ ಉಳಿದುಕೊಳ್ಳುವವನು ಪತ್ರಕರ್ತನಾಗಲು ಸಾಧ್ಯವಿಲ್ಲವೆಂಬುದು ಅವರ ಮನೋಭಾವವಾಗಿದೆ.

ಜೋಗಿಯವರ ಪ್ರಕಾರ ಭಾರತೀಪ್ರಿಯರ 'ಮೋಚಿ' ಕಥೆಯಲ್ಲಿ ಬರುವ ನಾಯಕನಿಗೆ ಉದ್ಧಾರ ಮಾಡುವ ಆಸೆ, ಆದರೆ ಸಹಾಯ ಮಾಡಲಿಲ್ಲವೆಂಬ ಪಾಪ ಪ್ರಜ್ಞೆ ಕಾಡುತ್ತದೆ. ಆದರೆ ಲಂಕೇಶರ 'ಗಿಳಿಯು ಪಂಜರದೊಳಿಲ್ಲ' ಕತೆಯ ನಾಯಕ ಸ್ವಲ್ಪ ಬದಲಾಗಿದ್ದಾನೆ. ಅವನಿಗೆ ಕ್ಷೌರಕನ ಬಗ್ಗೆ ಮಾಹಿತಿ ಬೇಕು. ಅವರ ಕಷ್ಟಗಳು ಬೇಕಿಲ್ಲ. ಅವನ ಪ್ರಾಮಾಣಿಕತೆಯ ಬಗೆಗೆ ಅನುಮಾನ. ಹೀಗೆ ಜೋಗಿಯವರು ಎರಡು ಕಥೆಗಳ ಮೂಲಕ ಸಮಾಜದಲ್ಲಿ ಬಡವರನ್ನು ಉದ್ಧಾರ ಮಾಡುತ್ತೇವೆ ಎಂದು ಬರೆಯುವ ಕಲ್ಪನಾ ಜಗತ್ತಿನ ಲೇಖಕರನ್ನು ಟೀಕಿಸುತ್ತಾರೆ. ಕಲ್ಪನೆಗಿಂತ ವಾಸ್ತವತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಪಾತ್ರಕ್ಕೆ ಜೀವ ತುಂಬುವ ಲೇಖಕರು ಅವರಿಗೆ ಒಳ್ಳೆಯ ಲೇಖಕರು.

**೪.೪. ತಾರಿಣಿ ಶುಭದಾಯಿನಿ : ಲೋಕದೃಷ್ಟಿ**

"ಸಾರ್ವತ್ರಿಕವಾಗಿ ಪುರುಷ ಅಹಂ ಅನ್ನು ಸ್ತ್ರೀ ವಾದವು ಮುಖಾಮುಖಿಯಾಗಿಸಿಕೊಂಡು ಜಿಜ್ಞಾಸೆಗೆ ತೊಡಗುತ್ತದೆ. ಆದರೆ ಪ್ರತಿಭಾರವರು ಗಂಡಸಿನ ಅಹಂ ಅನ್ನು ಮಿಥ್ ಎಂದು ಭಾವಿಸಿ ಅದನ್ನು ಒಡೆಯಲು ಇಚ್ಛಿಸುತ್ತಾರೆ."[೧೧] ಎಂದು ಹೇಳುವ ತಾರಿಣಿಯವರು, ಪುರಾಣದ ಕಲ್ಪನೆಯನ್ನು ಬದಿಗಿರಿಸಿ ವಾಸ್ತವದ ನೆಲೆಯಲ್ಲಿ ಪ್ರತಿಭಾರ ಕಾವ್ಯವನ್ನು ವಿವೇಚಿಸುವರು. ಇಂತಹ ಕಲ್ಪನೆಯನ್ನು ಮುರಿದು ಕಟ್ಟುವ ಕವಿತೆಗಳ ಸ್ತ್ರೀ ಸಮಾಜವನ್ನು ಇನ್ನೊಂದು ನೆಲೆಯಲ್ಲಿ ನೋಡಲು ಪ್ರೇರಿಸುತ್ತವೆ ಎಂದು ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಗಂಡಿನ ದೇಹ ಸೌಂದರ್ಯದ ನೆಲೆಯಲ್ಲಿ, ಹೆಣ್ಣು ಭೋಗದ ನೆಲೆಯಲ್ಲಿ ಚಿತ್ರಣಗೊಂಡಿರುವುದರ ಹಿಂದೆ ಪುರುಷ ಪ್ರಧಾನ ವ್ಯವಸ್ಥೆಯ ಹುನ್ನಾರವಿದೆ. ಅದಕ್ಕಾಗಿ ಪುರಾಣವನ್ನು ಮುರಿದು ಕಟ್ಟುವ ಸ್ತ್ರೀ ಸಮಾಜದ ಕಲ್ಪನೆ ಅವರ ಜೀವನ ದೃಷ್ಟಿ ಆಗಿದೆ.

ತಾರಿಣಿಯವರು ಹೇಳುವಂತೆ ಇಂದು ವ್ಯಾಪಾರೀಕರಣ ಹೆಣ್ಣು ಆವರಿಸಿಕೊಂಡಿರುವಂತೆ ಬೇರೆ ಯಾವುದನ್ನೂ ಆವರಿಸಿಕೊಂಡಿಲ್ಲ. ಜಾಗತೀಕರಣ ಹಾಗೂ ಸಂಸ್ಕೃತೀಕರಣದ ದಾಳಿಯ ಮುಖಾಮುಖಿಯನ್ನು ಅವರು ಗುರುತಿಸುತ್ತಾರೆ. ಮಧ್ಯಮ ವರ್ಗದವರು ನೈಟಿ, ವ್ಯಾನಿಶಿಂಗ್ ಕ್ರೀಮ್‌ಗಳ ಮೋಹಕ್ಕೆ ಬಿದ್ದು ಬದಲಾಗುವ ಮೂಲಕ ಕಾಲದ ಪಲ್ಲಟತೆಯೊಂದಿಗೆ ಸಂಸ್ಕೃತಿ ಮರೆಯಾಗುತ್ತಿರುವುದರ ಕುರಿತು ಅವರಲ್ಲಿ ಆತಂಕವಿದೆ. ಹಳೆಯ ಜಾನಪದ ಗೀತೆಯಾದ 'ಭಾಗ್ಯದ ಬಳೆಗಾರ ಹೋಗಿ ಬಾ ತವರಿಗೆ' ಜೊತೆಗೆ ಕೆ.ಎಸ್. ನರಸಿಂಹಸ್ವಾಮಿಯವರ 'ಬಳೆಗಾರ ಚೆನ್ನಯ್ಯ' ಕವಿತೆಗಳಲ್ಲಿನ ಬದಲಾದ ಲೋಕವು ಆಧುನಿಕತೆಗೆ ಉದಾಹರಣೆ ಆಗಿದೆ. ಆದರೆ ಪರಂಪರೆಯ ಕೊಂಡಿಯಾಗಿ ಆಧುನಿಕತೆಯೊಳಗೆ ತನ್ನ ಅಸ್ತಿತ್ವ ಹುಡುಕಾಡುವ ಕಾವ್ಯ ಅವರಿಗೆ ಪ್ರಿಯವಾದುದು.

ಗಂಡು-ಹೆಣ್ಣಿನ ನಡುವೆ ಇರಬಹುದಾದ ಸಂವಹನ ತೊಂದರೆ ಅರಿತು, ಸಂಘರ್ಷಗಳನ್ನು ದಾಟಿ ನಿಲ್ಲುವ ಪ್ರೀತಿಯ ಕಡೆಗೆ, ಸವಿತಾ ನಾಗಭೂಷಣರವರಿಗೆ ಆಸಕ್ತಿ ಎಂದು ಅವರು ಗುರುತಿಸುತ್ತಾರೆ. ಅಹಂ ಪ್ರಸ್ತಾಪಿಸುತ್ತಾ ಅದು ಇಬ್ಬರಲ್ಲೂ ಇರುವ ಸಾಮಾನ್ಯ ಗುಣವೆಂದು ಆಶಿಸುವ ಬದುಕು ಸವಿತಾ ಅವರ ಕಾವ್ಯದ ನೆಲೆಯೆಂದು ಅವರು ತಿಳಿಸುವರು. ಅವರಲ್ಲಿ ಗಂಡು-ಹೆಣ್ಣು ಇಬ್ಬರನ್ನೂ ಸಮಾನತೆಯ ತತ್ವದಲ್ಲಿ ನೋಡುವ ಮನಸ್ಥಿತಿಯ ವೈಚಾರಿಕ ಮನೋಭಾವವಿದೆ. ಅಂತಹ ದೇಶೀ ನೆಲೆಯ ಚಿಂತನೆಗಳು, ಆಧುನಿಕತೆಯ ಮೂಲಕ ಪರಂಪರೆ ಕಟ್ಟುವ ಇಲ್ಲಿನ ಚಿಂತನೆಗಳು ಕಾವ್ಯ ಕಟ್ಟಲು ಮುಖ್ಯವೆಂಬುದು ತಾರಿಣಿಯರ ಅಭಿಪ್ರಾಯ ವ್ಯಕ್ತವಾಗಿದೆ.

"ಸೀಮಿತ ಅರ್ಥದ ವೈಯುಕ್ತಿಕ ನೆಲೆಯ ಕಾವ್ಯದಿಂದ ಹೊರಟ ಮಹಿಳಾ ಕಾವ್ಯ ವಸ್ತು ವೈಶಾಲ್ಯಕ್ಕೆ ತೆರೆದುಕೊಳ್ಳಲಿಲ್ಲ"[13] ಎನ್ನುವ ಮಾತಿದೆ. ಇದೇ ಒಂದು ದೊಡ್ಡ ಮಿಥ್ ಎಂದು ತಾರಿಣಿಯವರು ಹೇಳುವರು. ಸ್ತ್ರೀಯ ಸೃಜನಶೀಲ ನೆಲೆಗಳು, ಸೃಷ್ಟಿಸುವ ಮಾದರಿಗಳು ಭಿನ್ನವಾಗಿರುವುದೇ ಮುಖ್ಯ ಕಾರಣವೆಂದು ಅವರ ಅಭಿಪ್ರಾಯವಾಗಿದೆ. ಚಳುವಳಿಯ ಕಾವಿನಲ್ಲಿ ಹುಟ್ಟುವ ಕಾವ್ಯದಲ್ಲಿ ಬುರುಗು ಹೆಚ್ಚಾಗಿದೆ. ದೇಶೀಯತೆಯ ನೆಲೆಯಲ್ಲಿ ಅನನ್ಯತೆಯನ್ನು ಹುಡುಕಾಡುವ ಧ್ವನಿಗಳು ನಮ್ಮಲ್ಲಿವೆ. ಅಂತಹ ಧ್ವನಿಗಳು ಮುಖ್ಯವೆಂಬುದು ತಾರಿಣಿಯರ ನಿಲುವಾಗಿದೆ. ನಮ್ಮದೇ ಆದ ದೇಸಿ ಪರಂಪರೆಯ ನೆಲೆಯಲ್ಲಿ ಕಾವ್ಯ ಕಟ್ಟುವ ಮೂಲಕ ಅನನ್ಯತೆ ಉಳಿಸುವ ಕವಯತ್ರಿಯರು ಅವರಿಗೆ ಆಪ್ತರಾಗುತ್ತಾರೆ.

ಸ್ತ್ರೀ ವಾದದ ಹಿನ್ನೆಲೆಯಲ್ಲಿ ಇಂದು ವ್ಯಾಪಕವಾಗಿ ಸ್ತ್ರೀ ಪರ ದೃಷ್ಟಿಕೋನ ಬೆಳೆಯುತ್ತಿರುವುದು ಬಹುಮುಖ್ಯ ಓದಿಗೆ ಎಡೆಮಾಡಿದೆ. ಅಂತಹ ಅವಳ ಜಗತ್ತನ್ನು ಪೂರ್ವಗ್ರಹಕ್ಕೆ ಒಳಪಡಿಸಿ ನೋಡುವುದನ್ನು ಬಿಡಬೇಕೆಂಬುದು ಅವರ ಅಭಿಪ್ರಾಯ. ಆದರೆ ಸ್ತ್ರೀ ಸಂವೇದನೆಗಳನ್ನು ಸ್ತ್ರೀ ಅಸ್ಮಿತೆಯ ಏಕಶಿಲಾರೂಪದಲ್ಲಿ ಗ್ರಹಿಸಿ ಬಹುಮುಖಿ ವ್ಯಕ್ತಿತ್ವದ ಸಾಧ್ಯತೆಗಳನ್ನು ಅಳಿಸಿ ಹಾಕುವ ಕ್ರಮವನ್ನು ಅವರು ವಿರೋಧಿಸುತ್ತಾರೆ. ಏಕೆಂದರೆ ಜಾತೀಯತೆಯಿಂದ ಕೂಡಿದ ನಮ್ಮ ಸಮಾಜದಲ್ಲಿ ಬ್ರಾಹ್ಮಣ ಸ್ತ್ರೀ ಅನುಭವಗಳಿಗೂ ದಲಿತ ಸ್ತ್ರೀಯ ಅನುಭವಗಳಿಗೂ ಭಿನ್ನತೆ ಇದೆ. ಇದಲ್ಲದೇ ಜಾತಿಯೊಳಗೆ ಇರುವ ಉಪಜಾತಿ, ಮೇಲ್ವರ್ಗ, ಕೆಳವರ್ಗ, ಸಂಸ್ಕೃತಿ ಬುಡಕಟ್ಟು ಸಂಸ್ಕೃತಿ ಹೀಗೆ ಹಲವಾರು ವೈವಿಧ್ಯಗಳಿಂದ ತುಂಬಿರುವ ಸಮಾಜದಲ್ಲಿ ಮಹಿಳೆಯ ಅನುಭವಗಳನ್ನು ಏಕರೂಪದಲ್ಲಿ ಗ್ರಹಿಸುವ ಕ್ರಮವನ್ನು ಅವರು ತಿರಸ್ಕರಿಸುತ್ತಾರೆ. ಬಹುಮುಖಿ ನೆಲೆಯಲ್ಲಿ ತನ್ನ ಅನುಭವಗಳನ್ನು ಪಕ್ವವಾಗಿಸಿ ಬರೆಯುವ ಬರಹಗಾರ್ತಿಯರು ತಾರಿಣಿಯವರಿಗೆ ಆತ್ಮೀಯರಾಗುತ್ತಾರೆ.

ತಾರಿಣಿಯವರು ಸಾಹಿತ್ಯ ರಚನೆಗೆ ಸ್ತ್ರೀ ಬರವಣಿಗೆ ತೆರೆದುಕೊಂಡಿದ್ದೇ ವಚನ ಚಳುವಳಿಯ ಮೂಲಕವೆಂದು ಗುರುತಿಸುತ್ತಾರೆ. ಅದಲ್ಲದೇ ಚಳುವಳಿಯ ಬೆಂಬಲ ಇಲ್ಲದಿದ್ದರೆ ಸ್ತ್ರೀಯರ

ಅಭಿವ್ಯಕ್ತಿಯಾಗುತ್ತಿರಲಿಲ್ಲ ಎನ್ನುತ್ತಾರೆ. ಆದರೆ ಕನ್ನಡ ಸಾಹಿತ್ಯದಲ್ಲಿ ಮಹಿಳೆಯರ ಬರವಣಿಗೆಗೆ ದೊಡ್ಡ ಚರಿತ್ರೆ ಇಲ್ಲದಿದ್ದರೂ ಅದು ಪಕ್ಷಪಾತ, ಪೂರ್ವಗ್ರಹಗಳಿಂದ ಕೂಡಿತ್ತು. ಸ್ತ್ರೀಯರ ಅಭಿವ್ಯಕ್ತಿಗೆ ಸ್ವಾತಂತ್ರ್ಯವಿರಲಿಲ್ಲ. ಆ ಮಹಿಳಾ ಸಾಹಿತ್ಯವನ್ನು ಪೂರ್ವಗ್ರಹದಿಂದ ಪುರುಷ ಸಮಾಜ ನೋಡುತ್ತಿತ್ತು. ಹೀಗೆ ಸ್ತ್ರೀ ಸಾಹಿತ್ಯ ರಚನೆಗೆ ಇದ್ದ ತೊಡಕುಗಳನ್ನು ಹೇಳುವ ಮೂಲಕ ಪುರುಷ ಸಮಾಜದ ಹಿಡಿತ ಎಷ್ಟಿತ್ತು ಎಂಬುದನ್ನು ಅವರು ತಿಳಿಸುವರು. ಅತ್ತಿಮಬ್ಬೆ, ವಡ್ಡಾರಾಧನೆಯ ರಾಣಿಯರು, ಅಮೃತಮತಿ ಇವರೆಲ್ಲರ ಉದಾಹರಣೆ ಕೊಡುತ್ತಾ ಅವರೆಲ್ಲ ಪುರುಷ ಸಮಾಜದ ನಿರೀಕ್ಷೆಗೆ ರೂಪಿಸಲ್ಪಟ್ಟ ಮಾದರಿಗಳೆಂದು ತಾರಿಣಿ ಹೇಳುವರು. ಸ್ತ್ರೀಯರನ್ನು ಪುರುಷ ಸಮಾಜವು ಒಂದು ಚೌಕಟ್ಟಿಗೆ ಇಟ್ಟು ನೋಡುವ ಕ್ರಮವನ್ನು ತಾರಿಣಿ ವಿರೋಧಿಸುತ್ತಾರೆ. ಪೂರ್ವಗ್ರಹ, ಪಕ್ಷಪಾತದಿಂದ ಹೊರಬಂದು ಸ್ತ್ರೀ ಸಾಹಿತ್ಯವನ್ನು ಗಮನಿಸಬೇಕೆಂಬ ಆಶಯವನ್ನು ಅವರು ವ್ಯಕ್ತಪಡಿಸುತ್ತಾರೆ.

"ಭಾರತದಲ್ಲಿ ಪುರೋಹಿತಶಾಹಿ ಕಾಣಿಸಿಕೊಳ್ಳುವುದು ಜಾತಿ ವ್ಯವಸ್ಥೆಯ ಮೂಲಕ. ಚತುರ್ವರ್ಣ ಪದ್ಧತಿಯಿಂದ ಬೆಳೆದ ಜಾತಿ ಪದ್ಧತಿ. ಸಾವಿರಾರು ಜಾತಿಗಳ ನಿರ್ಮಾಣಕ್ಕೆ ಕಾಣವಾಯಿತು. ಅದನ್ನು ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಎಂದು ಸರಳವಾಗಿ ವಿಂಗಡಿಸಬಹುದು"[೨] ಎಂದು ಹೇಳುತ್ತಾ ತಾರಿಣಿಯವರು ಬ್ರಾಹ್ಮಣತ್ವವೆಂಬ ಶ್ರೇಷ್ಠತೆಯ ಕಲ್ಪನೆಯನ್ನು ಪರಾಮರ್ಶಿಸುತ್ತಾರೆ. ಬ್ರಾಹ್ಮಣಶಾಹಿಗೆ ಬೌದ್ಧಧರ್ಮ ಪ್ರಬಲವಾಗಿ ಅಡ್ಡನಿಂತರೂ ಕಾಲಾಂತರದಲ್ಲಿ ಅದು ಮರೆಯಾದ ಮೇಲೆ ಬ್ರಾಹ್ಮಣ ಸಂಸ್ಕೃತಿಯು ಪ್ರಭಾವ ಹೆಚ್ಚಾಗಿ ಸಮಾಜವನ್ನು ನಿಯಂತ್ರಿಸಿತು ಎಂದು ಅವರು ಹೇಳುತ್ತಾರೆ. ಮುಂದೆ ಮಧ್ಯಕಾಲೀನ ಚಳುವಳಿಯಲ್ಲಿ ಜನಪದೀಯ ದೇವರುಗಳನ್ನು ಅಲ್ಲಗಳೆದು ಬ್ರಾಹ್ಮಣ ಮತ್ತು ವೈದಿಕ ದೇವರುಗಳೇ ಸರ್ವಶ್ರೇಷ್ಠವೆಂಬ ನಂಬಿಕೆಯನ್ನು ಮೇಲ್ವರ್ಗದವರು ಬಿತ್ತಿದರು ಎಂದು ಅವರು ಅರ್ಥೈಸುತ್ತಾರೆ. ಹೀಗೆ ನಮ್ಮೊಳಗೆ ಸಾಮಾಜಿಕ ಆಕ್ರಮಣಗಳು ಏರ್ಪಟ್ಟಿವೆ. ಶ್ರೇಷ್ಠವೆಂಬ ಕಲ್ಪನೆಯಲ್ಲಿ ವೈದಿಕ, ಕನಿಷ್ಠವೆಂದು ಜನಪದ ಸಂಸ್ಕೃತಿಗಳ ಮುಖಾಮುಖಿಯನ್ನು ಅವರು ಗುರುತಿಸುತ್ತಾರೆ. ಶ್ರೇಷ್ಠತೆಯ ಕಲ್ಪನೆ ಒಂದು ರಾಷ್ಟ್ರದ, ನಾಡಿನ ಜೀವನದಲ್ಲಿ ಒಂದೇ ಹಂತದಲ್ಲಿ ಕಂಡು ಬಂದ ಉದಾಹರಣೆಗಳು ವಿರಳವೆಂದು ಚರಿತ್ರೆ ಹೇಳುತ್ತದೆ. ಅದು ಕಾಲಕ್ಕೆ ತಕ್ಕಂತೆ ಬದಲಾಗುತ್ತಿರುತ್ತದೆ ಎಂದು ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಪುರೋಹಿತ ಶಾಹಿಯನ್ನು ಖಂಡಿಸಿದ ಬುದ್ಧ, ಬಸವರೇ ಕ್ರಮೇಣ ದೈವತ್ವ ಪಡೆದು ಅವರ ಹೆಸರಿನಿಂದಲೇ ಬಲವಾದ ಪುರೋಹಿತಶಾಹಿ ಬೆಳೆದುಬಂದಿತು ಎಂದು ತಾರಿಣಿ ನಮ್ಮ ಸಮಾಜದ ವೈರುಧ್ಯವನ್ನು ವಿಶ್ಲೇಷಿಸುತ್ತಾರೆ. ತಾರಿಣಿಯವರ 'ಶ್ರೇಷ್ಠತೆಯ ಸವಾರಿ' ಒಂದು ಚಿಕ್ಕ ಲೇಖನವಾದರೂ ಒಂದು ಮುಖ್ಯವಾದ ಸಾಂಸ್ಕೃತಿಕ ದುರಂತವನ್ನು ಅದು ಎತ್ತಿ ತೋರಿಸುತ್ತದೆ.

ನಮ್ಮ ಸಾಂಸ್ಕೃತಿಕ, ಧಾರ್ಮಿಕ ಪುರುಷರು ಸುಧಾರಣೆಯ ಹೆಸರಿನಲ್ಲಿ ಮೂಢನಂಬಿಕೆಗಳ ನಿವಾರಣೆಯ ಪ್ರಕ್ರಿಯೆಯಲ್ಲಿ ನಮ್ಮ ಜನಪದರ ನೈಜ ಸಂಸ್ಕೃತಿಯನ್ನು ನಾಶಪಡಿಸುವಲ್ಲಿ ವಹಿಸಿರುವ ಪಾತ್ರವನ್ನು ಅವರು ಗುರುತಿಸುತ್ತಾರೆ.

ತಾರಿಣಿಯವರು ವಸುಂಧೇಂದ್ರರ ಸಾಹಿತ್ಯವನ್ನು ಪರಿಚಯಿಸುವ ಮೂಲಕ ಅವರ ಕಥೆಯಲ್ಲಿರುವ ಎರಡು ಭಿನ್ನ ಸಂಸ್ಕೃತಿಗಳನ್ನು ಪರಿಚಯಿಸುವರು. ಕಾರ್ಪೊರೇಟ್ ಜಗತ್ತಿನ ಸಂವೇದನೆಗಳನ್ನು ಕೆಲವು ಕಥೆಗಳ ಮೂಲಕ (ಉದಾಹರಣೆಗೆ ಹೆಡ್‌ಹಂಟರ್ ಕಥೆಯ ನಾಯಕನ ತಲ್ಲಣಗಳು) ಅವರು ಪರಿಚಯಿಸುವರು. ಬಾಲ್ಯದ ಅನುಭವದ ಜೊತೆಗೆ ಹಳ್ಳಿ ಮತ್ತು ನಗರ ಜೀವನದ ಸಂಘರ್ಷಗಳನ್ನು ಕಥೆಯಲ್ಲಿ ಅಭಿವ್ಯಕ್ತಿಸಿರುವ ಕಥೆಗಾರನು ಅವರಿಗೆ ಇಷ್ಟವಾಗುವರು. ಪ್ರಸ್ತುತ ಕಾಲದಲ್ಲಿ ಬರಹಗಾರನಾದವನು ತನ್ನ ಸುತ್ತಲಿನ ವ್ಯವಸ್ಥೆಗೆ, ಸಮಸ್ಯೆಗಳಿಗೆ ಮುಖಾಮುಖಿಯಾಗದೆ. ಇದ್ದರೆ ಅಂತಹ ಬರವಣಿಗೆ ನಿಷ್ಪ್ರಯೋಜಕವಾಗುತ್ತದೆ. ಅಂತಹ ಬರಹಗಾರರು ಅವರಿಗೆ ಹತ್ತಿರವಾಗುವುದಿಲ್ಲವೆಂದು ಹೇಳುವ ಮೂಲಕ ವಾಸ್ತವತೆಯ ಚಿತ್ರಣದ ಕಥೆಗಳು ಬೇಕಾಗಿರುವ ತುರ್ತನ್ನು ತಾರಿಣಿಯವರು ತಿಳಿಸುತ್ತಾರೆ.

**೪.೫: ಜಿ.ಬಿ.ಹರೀಶ್ : ಲೋಕದೃಷ್ಟಿ**

ಹರೀಶ್‌ರವರ 'ಬೆಳಕಿನಾಟ' ಒಂದು ಪ್ರಮುಖ ವಿಮರ್ಶಾ ಕೃತಿಯಾಗಿದೆ. ಇದರಲ್ಲಿರುವ ಪ್ರಮುಖ ವಿಮರ್ಶಾ ಲೇಖನಗಳನ್ನು ಮುಖ್ಯವಾಗಿಟ್ಟುಕೊಂಡು ಸಮಾಜದ ಬಗೆಗಿನ ಲೋಕದೃಷ್ಟಿಯನ್ನು ಅರಿಯಲು ಇಲ್ಲಿ ಯತ್ನಿಸಬಹುದು. "ವಸಾಹತು ಚರಿತ್ರೆಯಲ್ಲಿ ವಿವಿಧ ಜಾತಿ, ಜನಪದಗಳಿಗೆ ಅವರ ನಂಬಿಕೆ ವಿಚಾರಗಳಿಗೆ ಹೆಚ್ಚಿನ ಮಹತ್ವವಿದೆ. ಉದಾ:ಫ್ರೆಂಚ್ ಪಾದ್ರಿ ಅಬ್ಬೆದುಬಾಯಿ ಬರೆದಿರುವ 'ಹಿಂದೂ ಕಸ್ಟಮ್ಸ್ ಅಂಡ್ ಮ್ಯಾನರ್ಸ್' ಇರಬಹುದು. ಅಥವಾ ಪ್ರವಾಸಿ ಬುಕನನ್ ದಾಖಲಿಸಿರುವ 'ಜರ್ನಿ ಥ್ರೋಚ್‌ದ ಕಂಟ್ರೀಸ್ ಆಫ್ ಮದ್ರಾಸ್, ಮಲಬಾರ್ ಅಂಡ್ ಕರ್ನಾಟಕ' ಎಂದು ಹೇಳುವ ಹರೀಶ್‌ರವರು ದೇವಚಂದ್ರ ಮೂಲತ: ಜೈನನಾದರೂ ವಸಾಹತುಶಾಹಿಯ ಪ್ರೇರಣೆಯಿಂದ ಕೃತಿಯೊಳಗೆ ಕೆಳಸಮುದಾಯದವರನ್ನು ಹೆಸರಿಸುವುದು ಅವನ ವಿದ್ವತ್ತಿಗೆ ಹಿಡಿದ ಕನ್ನಡಿಯೆಂದು ಹೇಳುತ್ತಾರೆ. ಲಿಖಿತ ಚರಿತ್ರೆಯಲ್ಲಿ ಎಲ್ಲೂ ಕಾಣಿಸದ ನಿರ್ಲಕ್ಷಿತ ಜನಸಮುದಾಯಗಳಾದ ಹೊಲೆಯ, ಮಾದಿಗ, ಕುರುಬ, ಕುಂಬಾರ, ಮಡಿವಾಳ, ಗೊಲ್ಲ, ವಡ್ಡ ಮುಂತಾದವರ ಬಗ್ಗೆ ಹಾಗೂ ಉಪಜಾತಿಗಳು ಹುಟ್ಟಿರುವುದಕ್ಕೆ ಕೊಟ್ಟ ಸೃಷ್ಠಿ ಪುರಾಣಗಳ ನಿದರ್ಶನಗಳು ಅವನ ವಿಶಾಲ ಮನೋಭಾವವನ್ನು ತಿಳಿಸುತ್ತವೆ. ಅಷ್ಟೇ ಅಲ್ಲ ಈ ರೀತಿಯ ಕೃತಿಕಾರರನ್ನು ನಿರ್ಲಕ್ಷಿಸುತ್ತಿರುವ ವಿಮರ್ಶಕರು ಹೊಸ ನೆಲೆಯಲ್ಲಿ ಚಿಂತಿಸಬೇಕೆಂಬುದು ಅವರು ಹೇಳುತ್ತಾರೆ.

ಕವಿ, ಸಾಹಿತಿ, ಬರಹಗಾರರು ತಮ್ಮ ಸಮಕಾಲೀನ ಬದುಕಿನ ಏರಿಳಿತಗಳಿಗೆ ಸ್ಪಂದಿಸಿ ಆ ಕಾಲದ ತಲ್ಲಣವನ್ನು, ಜನ ಜೀವನದ ವಿವರಗಳನ್ನು, ಆದಷ್ಟೂ ತಮ್ಮ ವರ್ತಮಾನದ ಭಾಷೆಯಲ್ಲಿ ಹೇಳಿ, ಜನರ ಭಾವನೆ ಚಿಂತನೆಗಳಿಗೆ ದನಿಯಾಗುತ್ತಾನೋ, ಅವನೆ ಆಧುನಿಕ ಕವಿಗಳೆಂದು ಹರೀಶ್ ಅವರು ಭಾವಿಸುತ್ತಾರೆ. 'ರಾಜಾವಳಿ ಕಥಾಸಾರ'ದಲ್ಲಿ ಬ್ರಿಟಿಷರೆಸಿಡೆಂಟ್‌ರ ಆಳ್ವಿಕೆ ಕುರಿತು ಮೆಚ್ಚುಗೆ, ಮುಮ್ಮಡಿ ಕೃಷ್ಣರಾಜನ ಮೇಲೆ ಗೌರವ, ಆದರೆ ಅರಮನೆಯ ಒಳಗಿನ ರಾಜಕೀಯದ ಬಗ್ಗೆ ವ್ಯಂಗ್ಯ, ಹೊಸದಾಗಿ ಕನ್ನಡದ ನೆಲದಲ್ಲಿ ಬೇರೂರುತ್ತಿದ್ದ ಕ್ರೈಸ್ತ ಧರ್ಮಕ್ಕೆ ಸ್ಪಂದನ, ಇಂಗ್ಲಿಷ್ ಪದಗಳ ಬಳಕೆ ಮುಂತಾದ ಸಂಗತಿಗಳಿವೆ. ಇಂತಹ ಸಂಕೀರ್ಣ ಸಂಗತಿಗಳನ್ನು ನಿರೂಪಿಸುವ ದೇವಚಂದ್ರ ಕವಿ ಅವರಿಗೆ ಸಾಂಸ್ಕೃತಿಕವಾಗಿ ಮುಖ್ಯ ಲೇಖಕರಾಗಿ ಕಾಣುತ್ತಾರೆ. ಈ ರೀತಿಯಾಗಿ ಕವಿಯೊಬ್ಬ ಸಮಾಜದೊಳಗಿನ ಎಲ್ಲಾ ನೆಲೆಗಳನ್ನು ತನ್ನ ಕೃತಿಯೊಳಗೆ ಚರ್ಚಿಸಿರುವ ಕ್ರಮದ ಹಿಂದೆ ಬ್ರಿಟಿಷ್ ವ್ಯವಸ್ಥೆಯ ಪ್ರೇರಣೆಯಿರುವುದರಿಂದಲೇ ದೇವಚಂದ್ರನಿಗೆ ವಸಾಹತುಶಾಹಿ ಬಗೆಗಿರುವ ಪ್ರೀತಿ ವ್ಯಕ್ತವಾಗಿರುವುದನ್ನು ಗಮನಿಸಬಹುದಾಗಿದೆ.

ಹರೀಶ್ ಅವರು 'ವಸಾಹತುಶಾಹಿಯ ನೆರಳು' ಎಂಬ ಲೇಖನದಲ್ಲಿ ಯಾರ ಪರವಾದ ಚರಿತ್ರೆ ನಮ್ಮ ನಡುವೆ ನಿರ್ಮಾಣವಾಗುತ್ತಿದೆ ಎಂಬ ಪ್ರಶ್ನೆ ಕೇಳಿಕೊಳ್ಳುತ್ತಾರೆ. "ಯುರೋಪಿಯನ್ನವರು ಕಟ್ಟಿಕೊಂಡಿರುವ ಚರಿತ್ರೆಯಲ್ಲಿ ಆಳುವ ಗುಂಪಿನ ಕೈಯಲ್ಲಿ ಅಧಿಕಾರ ಮತ್ತು ಇತಿಹಾಸ ಬರೆಯುವ ಶಕ್ತಿ ಇರುತ್ತದೆ. ಇದರಿಂದಾಗಿ ಇತಿಹಾಸವನ್ನು ಗೆದ್ದವರ ನೆಲೆಯಿಂದಲೇ ಬರೆಯಲಾಗುತ್ತದೆ. ಸೋತವರ ಚರಿತ್ರೆಯ ಕೋಶದಲ್ಲಿ ಅಧೀನರಾಗಿಯೇ ಇರಬೇಕಾಗುತ್ತದೆ. ಹೀಗಾಗಿ ಅಲ್ಲಿ ಸೋತವರ ನೊಂದವರ ದಿಗ್ಭ್ರಾಂತರ, ಮುಗ್ಧರ, ಭಾವನೆಗಳ ದಾಖಲೆ ಇರುವುದೇ ಇಲ್ಲ"[೧೪] ಎಂದು ಹೇಳುತ್ತಾರೆ. ಹೀಗೆ ಹರೀಶ್‌ರವರು ಚರಿತ್ರೆಯ ರಚನೆಯ ಹಿಂದಿರುವ ಪ್ರಭುತ್ವಶಾಹಿಯ ಧೋರಣೆಯನ್ನು ಗುರುತಿಸುತ್ತಾರೆ. ಎಲ್ಲಾ ಕಾಲಗಳಲ್ಲೂ ಮೇಲ್ವರ್ಗದವರ ಅಧಿಕಾರಸ್ಥರ ಜೀವನ ಚರಿತ್ರೆ ದಾಖಲಾಗಿರುತ್ತದೆ. ಆದರೆ ಬಡವರ ನಿರ್ಗತಿಕರ ಕೆಳ ಸಮುದಾಯಗಳ ಜೀವನ ಚಿತ್ರಣ ಚರಿತ್ರೆಯ ಪುಟಗಳನ್ನು ಸೇರಿರುವುದಿಲ್ಲವೆಂದು ಅವರು ಹೇಳುವರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಗಾಂಧಿ, ನೆಹರು, ತಿಲಕ್ ಮುಂತಾದವರು ದಾಖಲಾಗಿರುವಂತೆ ಸಾಮಾನ್ಯ ಜನರು ದಾಖಲೆಯಾಗದೆ ಇರುವುದನ್ನು ನಾವು ಇಲ್ಲಿ ಗಮನಿಸಬಹುದಾಗಿದೆ. ಹೀಗೆ ಉಚ್ಚವರ್ಗದವರ ಚರಿತ್ರೆ ಮಾತ್ರ ದಾಖಲಾಗುತ್ತಿರುವ ಕ್ರಮವನ್ನು ಅಲ್ಲಗಳೆದು ಪ್ರತಿಯೊಬ್ಬರಿಗೂ ಚರಿತ್ರೆಯೊಳಗೆ ಅವಕಾಶ ಸಿಗಬೇಕೆಂಬ ಕುವೆಂಪು ಅವರ ವಿಶ್ವಮಾನವತೆಯ ತತ್ವವನ್ನು ಅವರು ಇಷ್ಟಪಡುವರು. ಎಲ್ಲರನ್ನೂ ಸಮಾನತೆಯ ನೆಲೆಯಲ್ಲಿ ನೋಡಬೇಕೆಂಬ ಜೀವನಪರ ಕಾಳಜಿ ಅವರಲ್ಲಿ ವ್ಯಕ್ತವಾಗಿದೆ.

ಹರೀಶ್‌ರವರು ಸಂಸ್ಕೃತಿಯನ್ನು ಕುರಿತು ಶಾಸನ, ನಾಣ್ಯ, ಮೊದಲಾದ ಆಕರಗಳನ್ನು ಪ್ರಧಾನವಾಗಿ ಸ್ವೀಕರಿಸಿ ಬರೆಯುವ ಇತಿಹಾಸವನ್ನು ಒಪ್ಪವುದಿಲ್ಲ. ಜನಸಾಮಾನ್ಯರ ಲೋಕದೃಷ್ಟಿ ಮತ್ತು ಹತ್ತು ಹಲವು ವಿಷಯಗಳನ್ನು ಕುರಿತಂತೆ ಮೌಲಿಕ ಪರಂಪರೆಯು ನೀಡುವ ತಿಳುವಳಿಕೆಯನ್ನು ಆಧರಿಸಿ ಬರೆಯುವ ಇತಿಹಾಸ ಬಹುಮುಖಿ ಆಯಾಮವನ್ನು ಹೊಂದಿದೆ. ಇಂತಹ ಬಹುಮುಖಿ ಸಂಸ್ಕೃತಿ ನೆಲೆಯಲ್ಲಿ ರಚನೆಕೊಂಡ ಇತಿಹಾಸವನ್ನು ಅವರು ಒಪ್ಪುತ್ತಾರೆ. ಮೌಖಿಕ ಪರಂಪರೆಯನ್ನು ಆಧರಿಸಿ ಕನ್ನಡ ನಾಡಿನ ಬಹುಮುಖಿ ಸಂಸ್ಕೃತಿಯ ಅರಿವನ್ನು ಅಕ್ಷರ ಲೋಕಕ್ಕೆ ಪರಿಚಯಿಸಿದ ಕವಿ ದೇವಚಂದ್ರ, ಆದ್ದರಿಂದಲೇ ಬಹುಮುಖಿ ನೆಲೆಯಲ್ಲಿ ದೇವಚಂದ್ರ ತನ್ನ 'ರಾಜಾವಳಿ ಕಥಾಸಾರ'ದಲ್ಲಿ ಉಲ್ಲೇಖ ಮಾಡಿರುವುದರಿಂದ ಅವರಿಗೆ ಆತ ಹೆಚ್ಚು ಮುಖ್ಯ ಲೇಖಕನಾಗಿದ್ದಾನೆ. ಯಾವುದೇ ಒಂದು ಧರ್ಮ, ಜಾತಿಗೆ ತನ್ನನ್ನು ಸೀಮಿತಗೊಳಿಸಿಕೊಳ್ಳದೆ, ತನ್ನ ಕಾಲದ ನಿರ್ಲಕ್ಷಿತ ಸಮುದಾಯದ ಬಗ್ಗೆ ಚರ್ಚಿಸಿರುವ ದೇವಚಂದ್ರನ ಕ್ರಮ ಇತರರಿಗೆ ಮಾದರಿಯಾಗಬೇಕೆಂಬ ಆಶಯವನ್ನು ಹರೀಶ್ ಅವರು ವ್ಯಕ್ತಪಡಿಸಿದ್ದಾರೆ.

ಜೈನಮತದ ನಿಷ್ಠೆಯೊಂದಿಗೆ ರಾಜತ್ವವನ್ನು ಗೌರವಿಸುವ ದೇವಚಂದ್ರನು ನಿಜಾಂಶಗಳನ್ನು ಮರೆಮಾಚದೆ ನಿರ್ಭೀತಿಯಿಂದ ಆಡಳಿತ ದೋಷ, ಕಂಪನಿ ಸರ್ಕಾರದ ಜನೋಪಯೋಗಿ ಕಾರ್ಯಗಳನ್ನು ಹೇಳುವ ಕವಿಯ ಎದೆಗಾರಿಕೆಯನ್ನು ಅವರು ಮೆಚ್ಚುವರು. ಅವರಿಗೆ ತುಂಬಾ ಆಸಕ್ತಿ ಕೆರಳಿಸಿರುವ ವಿಷಯವೆಂದರೆ ಮೈಸೂರು ಅರಸರುಗಳ ಕಾಲದಲ್ಲೇ ಇದ್ದು ಆ ವಂಶದ ಆಡಳಿತ ಕ್ರಮವನ್ನು ವಿಮರ್ಶಿಸುವ ದೇವಚಂದ್ರನ ದಿಟ್ಟತನ. ಹಾಗೆಯೇ ವಸಾಹತುಶಾಹಿಯ ಪ್ರಭಾವದ ದಟ್ಟ ನೆರಳಿನಲ್ಲಿ ರೂಪಿತವಾದ ಪಠ್ಯಕ್ಕೆ ಅದರ ದುಷ್ಪರಿಣಾಮಗಳನ್ನು ದಾಖಲಿಸಲು ಸಾಧ್ಯವಾಗದೆ ಇರುವುದನ್ನು ಗ್ರಹಿಸಿರುವುದು ಹರೀಶ್ ಅವರ ವಿಮರ್ಶಾತ್ಮಕ ಚಿಂತನೆಗಳಿಗೆ ಸಾಕ್ಷಿಯಾಗಿದೆ.

ಹರೀಶ್‌ರವರು ಕುವೆಂಪುರವರ ವೈಚಾರಿಕತೆಯ ಮುಖ್ಯ ಅಧಿಷ್ಠಾನವೇ ಅವರ ವಿಶ್ವ ಮಾನವ ಸಂದೇಶ ಎಂದು ಹೇಳುತ್ತಾರೆ. ಇದಲ್ಲದೇ ಇಂದು ಮನುಷ್ಯನು ಭಾಷೆ, ರಾಜ್ಯ, ರಾಷ್ಟ್ರಗಳ ಗಡಿಯಲ್ಲಿ ಬಂಧಿತನಾಗಿ ತಾನು ವಿಶ್ವಮಾನವ ಎಂಬುದನ್ನು ಮರೆತಿದ್ದಾನೆ. ಇಂತಹ ಸಂಕುಚಿತ ನೆಲೆಯಲ್ಲಿ ಬಂಧಿಗಳಾಗಿರುವ ಜನರು ಬದಲಾಗಬೇಕೆಂದು ಅವರು ಹೇಳುವರು. ಎಲ್ಲ ರೀತಿಯ ವಿದ್ಯೆ, ನಾಗರಿಕತೆ, ಸಂಸ್ಕೃತಿಗಳು ಮನುಷ್ಯನನ್ನು ವಿಶ್ವ ಮಾನವನನ್ನಾಗಿ ಬದಲಾಯಿಸುತ್ತವೆ ಎಂಬುದು ಅವರ ನಂಬಿಕೆಯಾಗಿದೆ. ಭಾಷೆ, ನೆಲೆ, ಜಾತಿ ಮುಂತಾದ ನೆಲೆಗಳಲ್ಲಿ ಪರಸ್ಪರ ಕಿತ್ತಾಡುವುದನ್ನು ಬಿಟ್ಟು ನಾವೆಲ್ಲ ಒಂದೇ ಎನ್ನುವ ಭಾವನೆಯನ್ನು ಬೆಳಸಿಕೊಳ್ಳಬೇಕೆಂಬ ವಿಶಾಲ ಜೀವನ ದೃಷ್ಟಿ ಅವರಲ್ಲಿ ವ್ಯಕ್ತವಾಗಿದೆ. ಇಂತಹ ಸಮನ್ವಯದ

ಬದುಕನ್ನು ಅವರು ಒಪ್ಪುತ್ತಾರೆ.

ಕುವೆಂಪು ಅವರು ವೈಚಾರಿಕ ಸ್ತರದಲ್ಲಿ ಜಾತಿ–ವರ್ಣ–ವ್ಯವಸ್ಥೆ ವಿರೋಧದಲ್ಲಿ ಬೇಂದ್ರೆ, ಮಾಸ್ತಿ, ಶ್ರೀರಂಗ, ದೇವುಡು ಅವರಿಗಿಂತ ಹೆಚ್ಚು ಪ್ರಗತಿಶೀಲರು ಎಂದು ಅವರು ಕರೆಯುತ್ತಾರೆ. ತಮ್ಮ ಕಾಲದಲ್ಲಿ 'ಶೂದ್ರತಪಸ್ವಿ' 'ಜಲಗಾರ'ದಂತಹ ನಾಟಕಗಳನ್ನು ರಚಿಸಿ ಸಾಮಾಜಿಕ ವ್ಯವಸ್ಥೆಗೆ ಸವಾಲು ಎಸೆದ ಅವರ ದಿಟ್ಟಕ್ರಮ ಹರೀಶ್‌ರವರಿಗೆ ಹೆಚ್ಚು ಆಪ್ತವಾಗುತ್ತದೆ. ವೈಚಾರಿಕ ನೆಲೆಯಲ್ಲಿ ಕವಿಗಳು ತಮ್ಮನ್ನು ತೊಡಗಿಸಿಕೊಂಡು ಸಮಾಜವನ್ನು ತಿದ್ದುವ ಕೆಲಸ ಮಾಡಬೇಕೆಂಬುದು ಅವರ ಆಶಯ. ಕವಿಗಳು, ಬರಹಗಾರರು, ಜಾತಿ, ವರ್ಣ–ವರ್ಗವೆಂಬ ಕಂದಕದಿಂದ ಹೊರಬಂದು ಸಮಾಜವನ್ನು ಬದಲಾಯಿಸಬೇಕೆಂಬ ಕಾಳಜಿಯು ಅವರಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು. ಇದು ಸಮಾಜದ ಬಗೆಗಿರುವ ಅವರ ದೃಷ್ಟಿಕೋನವು ಆಗಿದೆ. ಅದ್ದರಿಂದಲೇ ವಿಚಾರ ಸಾಹಿತ್ಯದ ಮೂಲಕ ಕ್ರಾಂತಿಕಾರಿ ಬದಲಾವಣೆ ಮಾಡಿದ ಕುವೆಂಪುರವರು ಅವರ ನೆಚ್ಚಿನ ಬರಹಗಾರರಾಗಿದ್ದಾರೆ. ಏಕೆಂದರೆ ಬ್ರಾಹ್ಮಣ ಸಮಾಜದಲ್ಲಿ ಶೂದ್ರ ಬರಹಗಾರನೊಬ್ಬ ತನ್ನ ಅಸ್ತಿತ್ವಕ್ಕಾಗಿ ಹೋರಾಡಿ, ಸಾಹಿತ್ಯದ ಮೂಲಕ ಸಮಾಜದಲ್ಲಿನ ಅಸಮಾನತೆಯನ್ನು ಒಡೆಯುವ ಪ್ರಯತ್ನ ಮಾಡಿರುವುದು ಮಾದರಿಯಾಗಿದೆ.

### ೪.೬. ಕವಿತಾ ರೈ : ಲೋಕದೃಷ್ಟಿ

ಕವಿತಾ ರೈರವರು 'ಜಾಗತೀಕರಣ ಮತ್ತು ಮಹಿಳಾ ಅಸ್ತಿತ್ವದ ಪ್ರಶ್ನೆ' ಎಂಬ ಲೇಖನದಲ್ಲಿ ಜಾಗತೀಕರಣದ ಮೂಲಕ ಖಾಸಗೀಕರಣ, ಉದಾರೀಕರಣದ ಮೂಲಕ ಬಂಡವಾಳಶಾಹಿ ಸಂಸ್ಕೃತಿಯು ಸಾರ್ವತ್ರಿಕರಣಗೊಳ್ಳುತ್ತಿದೆ ಎಂದು ಹೇಳುತ್ತಾರೆ. ಆ ಮೂಲಕ ಎಲ್ಲಾ ರಾಷ್ಟ್ರ ಪ್ರಭುತ್ವಗಳು ಅಮೇರಿಕಾದ ಸಾರ್ವಭೌಮ ಚಕ್ರಾಧಿಪತ್ಯಕ್ಕೆ ಅಧೀನವಾಗಿ ಉಳಿಯುವ ರಾಜಕೀಯ ವ್ಯವಸ್ಥೆಯೊಂದನ್ನು ಜಾಗತೀಕರಣ ಉಂಟುಮಾಡುತ್ತದೆಂಬ ಆತಂಕವನ್ನು ಅವರು ವ್ಯಕ್ತಪಡಿಸುತ್ತಾರೆ. ಜಾಗತೀಕರಣ ಬಲೆಯು ವಿಶ್ವದ ಬಹುಮುಖ ಸಂಸ್ಕೃತಿಯನ್ನು ಏಕಕೇಂದ್ರಿಯ ಪ್ರಾಬಲ್ಯಕ್ಕೆ ಸಿಲುಕಿಸುವ ಪ್ರಕ್ರಿಯೆಯನ್ನು ಅವರು ಒಪ್ಪುವುದಿಲ್ಲ. ಹೀಗಾಗಿ ಪುರುಷ ಕೇಂದ್ರಿತ ಜಾಗತೀಕರಣದ ಸಂರಚನೆಯಲ್ಲಿ ಎಲ್ಲಾ ರೀತಿಗಳಿಂದಲೂ ಬಲಿಪಶುಗಳಾಗುತ್ತಿರುವ ಮಹಿಳೆಯರ ಜೀವನ ಕ್ರಮಗಳನ್ನು ಬದಲಾಯಿಸುವ ಅವರ ಕಾಳಜಿಯು ಇಲ್ಲಿ ವ್ಯಕ್ತವಾಗಿದೆ. ಅದು ಹೀಗಿದೆ:

"ಜಾಗತೀಕರಣದ ಹಾದಿಯಲ್ಲಿಯೂ ಸಹ ಅಂತಿಮವಾಗಿ, ಅನಿವಾರ್ಯವಾಗಿ ಪಾಲುದಾರರಾಗುವವರೆಂದರೆ ಮಹಿಳೆಯರು ಸಂಖ್ಯೆಯಲ್ಲಿ ವಿಶ್ವದ ಅರ್ಧಭಾಗದಷ್ಟಿರುವ ಮಹಿಳೆಯರು. ಚಾರಿತ್ರಿಕವಾಗಿ ಎಲ್ಲಾ ಸಂದರ್ಭಗಳಲ್ಲಿಯೂ ಪುರುಷರ ಅಧೀನತೆಯನ್ನು

ಒಪ್ಪಕೊಳ್ಳಬೇಕಾಗಿರುವಂತೆ ಜಾಗತೀಕರಣ ಸಂದರ್ಭದಲ್ಲಿ ಒಪ್ಪಿಕೊಳ್ಳಬೇಕಾಗಿದೆ."[೧೫] ಹೀಗೆ ಕವಿತಾ ರೈರವರು ಜಾಗತೀಕರಣ ತನ್ನೊಳಗೆ ಇಂದು ಮಹಿಳೆಯರನ್ನು ಸೇರಿಸಿಕೊಂಡಿರುವುದಲ್ಲದೆ, ಅವರನ್ನು ಅಧೀನರಾಗಿ ಮಾಡಿಕೊಂಡಿರುವ ವ್ಯವಸ್ಥೆಯಾಗಿದೆ ಎಂದು ವಿರೋಧಿಸುತ್ತಾರೆ. ಇಂದಿನವರೆಗೂ ಪುರುಷರ ಅಧೀನದಲ್ಲೇ ತಮ್ಮ ಅಸ್ತಿತ್ವವನ್ನು ಹುಡುಕಾಡಿದ ಮಹಿಳೆಯರು, ಜಾಗತೀಕರಣದ ಸಂದರ್ಭದಲ್ಲೂ ಅಧೀನತೆಯಿಂದ ಹೊಬರಲಾಗದೆ ಇರುವುದನ್ನು ಅವರು ಗುರುತಿಸುತ್ತಾರೆ. ಜಾಗತೀಕರಣದ ವ್ಯವಸ್ಥೆಯ ಹಿಂದ ಪುರುಷ ನಿರ್ಮಿತ ಸಂಸ್ಕೃತಿಯನ್ನು ಅವರು ಒಪ್ಪುವುದಿಲ್ಲ. ಜಾಗತೀಕರಣವು ಸಮಾಜದ ಬಹುಮುಖ ಅಸ್ತಿತ್ವನ್ನು ಪಲ್ಲಟಗೊಳಿಸಿ ಏಕರೂಪ ಸಮಾಜವನ್ನು ನಿರ್ಮಿಸುತ್ತವೆ ಎಂಬ ಆಶಯ ಅವರಲ್ಲಿ ವ್ಯಕ್ತವಾಗಿದೆ.

"ಜಾಗತೀಕರಣವನ್ನು ಲಿಂಗ ತಟಸ್ಥವಾದ ಆರ್ಥಿಕ ನೀತಿ ಎಂದು ಪಶ್ಚಿಮದ ಆರ್ಥಿಕ ಸ್ತ್ರೀವಾದಿ ಚಿಂತಕರಾದ ಮಾರ್ಥಸಿ, ಮಿನ್ಸರ್, ಮತ್ತು ಪೊಲಾಚೆಕ್ ಕ್ಲಾರಾಹ್ಯಾನ್ಸಿ, ಬೆಟ್ಟಿರಿಚ್ವರ್ಡ್ ಮೊದಲಾದವರು ವಿವರಿಸುತ್ತಾರೆ."[೧೬] ಎಂದು ಕವಿತಾ ಹೇಳುತ್ತಾರೆ

ಕವಿತಾ ರೈರವರು ಲಿಂಗ ತಟಸ್ಥವು ಮಹಿಳೆಯರ ಮತ್ತು ಪುರುಷರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸನ್ನಿವೇಶಗಳು ಸಮಾನವಾದಾಗ ಮಾತ್ರ ಸಾಧ್ಯವಾಗುತ್ತದೆಂದು ಭಾವಿಸುತ್ತಾರೆ. ಚಾರಿತ್ರಿಕವಾಗಿ ಪುರುಷ ಮತ್ತು ಸ್ತ್ರೀಯರ ನಡುವಿನ ಅಸಮಾನತೆ ಇಂದಿಗೂ ಮುಂದುವರೆದಿರುವ ಕ್ರಮವನ್ನು ಅವರು ಗುರುತಿಸುತ್ತಾರೆ. ಜಾಗತೀಕರಣ ಇಂದಿನ ಸಂದರ್ಭದಲ್ಲಿ ಸಮೂಹ ಮಾಧ್ಯಮಗಳ ಮೂಲಕ ಲಿಂಗತಟಸ್ಥ ಭ್ರಮೆ ಹುಟ್ಟಿಸುತ್ತಿರುವುದನ್ನು ಅವರು ವಿರೋಧಿಸುತ್ತಾರೆ. ಇನ್ನೂ ಮುಂದಾದರೂ ಸ್ತ್ರೀಯರಿಗೆ ಸಮಾನತೆ ದೊರೆಯಬೇಕು. ಅಂತಹ ವ್ಯವಸ್ಥೆಯನ್ನು ಅವರು ಸ್ವಾಗತಿಸುತ್ತಾರೆ. ಪುರುಷ ವ್ಯವಸ್ಥೆಯು ಸ್ತ್ರೀಯರ ಮೇಲೆ ನಡೆಸುವ ದಬ್ಬಾಳಿಕೆಯ ಸಾಮಾಜಿಕ ವ್ಯವಸ್ಥೆಯನ್ನು ಒಪ್ಪುವುದಿಲ್ಲವೆಂಬ ಆಶಯ ಅವರಲ್ಲಿ ವ್ಯಕ್ತವಾಗಿದೆ.

"ಲೇಬರ್ ಮಾರ್ಕೆಟಿಂಗ್ ವ್ಯವಸ್ಥೆಯಲ್ಲಿ ಮಹಿಳೆಯರು ಹೆಚ್ಚಾಗಿ ಶ್ರಮ ಪ್ರಧಾನವಾದ ಉದ್ಯೋಗಗಳಲ್ಲಿ ಕಂಡು ಬಂದರೆ ಪುರುಷರು ಬಂಡವಾಳ ಪ್ರಧಾನವಾದ ಪುದ್ದೆಗಳಲ್ಲಿ ನೇಮಕಗೊಳ್ಳುತ್ತಾರೆ. ಪುರುಷರಿಗೆ ವೃತ್ತಿ ಭದ್ರತೆ, ಆರ್ಥಿಕ ವೇತನ ಲಭ್ಯವಾದರೆ, ಮಹಿಳೆಯರು ಕಡಿಮೆ ವೃತ್ತಿ ಭದ್ರತೆಯಲ್ಲಿ ಅಲ್ಪ ಪ್ರಮಾಣದ ವೇತನಕ್ಕೆ ಸೀಮಿತಗೊಂಡು ದುಡಿಯುತ್ತಿರುವುದು ವ್ಯಕ್ತವಾಗುತ್ತದೆ."[೧೭] ಎಂದು ಕವಿತಾ ಹೇಳುತ್ತಾರೆ.

ಮಹಿಳೆಯರು ಶ್ರಮ ಪ್ರಧಾನವಾದ ಉದ್ಯೋಗಗಳಲ್ಲಿ ತೊಡಗಿಕೊಂಡರೂ ಅವರಿಗೆ ಸರಿಯಾಗಿ ಕೂಲಿಯು ದೊರೆಯುತ್ತಿಲ್ಲ. ಪುರುಷ, ಮತ್ತು ಸ್ತ್ರೀಯರ ನಡುವಿನ ಕೂಲಿಯ ವ್ಯತ್ಯಾಸ ಕ್ರಮವನ್ನು ಲೇಖಕಿ ಗುರುತಿಸುತ್ತಾರೆ. ಮಹಿಳೆಯರಿಗೆ ಸಮಾನವಾದ ವೇತನವನ್ನು

ನೀಡದೆ ಇರುವ ಬಂಡವಾಳಶಾಹಿ ಪುರುಷ ವ್ಯವಸ್ಥೆಯ ಕ್ರಮವನ್ನು ಅವರು ವಿರೋಧಿಸುತ್ತಾರೆ. ಪುರುಷರಿಗೆ ಕೊಡುವಂತೆ ವೃತ್ತಿಭದ್ರತೆ, ಅಧಿಕ ವೇತನ ಸ್ತ್ರೀಯರಿಗೆ ದೊರೆಯಬೇಕೆಂಬ ಆಶಯ ಅವರಲ್ಲಿ ವ್ಯಕ್ತವಾಗುತ್ತದೆ. ಶ್ರಮದ ಕೆಲಸಗಳಲ್ಲಿ ಸ್ತ್ರೀಯರಿಗೆ ಕೂಲಿ ವ್ಯತ್ಯಾಸವಿದೆ. ಆದರೆ ಬುದ್ಧಿ ಪ್ರಧಾನವಾದ ಕೆಲಸಗಳಲ್ಲಿ ಇಂದು ಮಹಿಳೆಯರು ಹೆಚ್ಚುಹಣ ಪಡೆಯುತ್ತಿರುವುದನ್ನು ಗಮನಿಸಬಹುದಾಗಿದೆ. ಉದಾ: ಸಾಫ್ಟ್‌ವೇರ್ ಇಂಜಿನಿಯರ್ ಮಹಿಳೆಯರು, ಇಂದ್ರನೂಯಿ ಎಂಬ ಬಹುರಾಷ್ಟ್ರೀಯ ಕಂಪನಿಯ ಆಡಳಿತಾಧಿಕಾರಿ ಇತ್ಯಾದಿ. ಇಷ್ಟೆಲ್ಲವಿದ್ದರೂ ಅಂಗಡಿಮಳಿಗೆ, ಸೇಲ್ಸ್‌ಗರ್ಲ್ ದುಡಿಯುತ್ತಿರುವ ಬಹಳಷ್ಟು ಮಂದಿ ಮಹಿಳಾ ಕಾರ್ಮಿಕರಿಗೆ ನ್ಯಾಯಯುತವಾದ ಸಮಾನವಾದ ಕೂಲಿ ನೀಡುವಿಕೆ ಸಾಧ್ಯವಾಗಿಲ್ಲ. ಈ ರೀತಿ ವಾದಿಸುವ ಕವಿತಾ ರೈರವರಲ್ಲಿ ಸ್ತ್ರೀಪರ ಕಾಳಜಿ ಇರುವುದು ಕಾಣುತ್ತದೆ.



ಪರಂಪರಾಗತವಾಗಿ ಪೂರ್ವ ಕಾಲದಿಂದಲೇ ಸ್ವತಂತ್ರ ವ್ಯಕ್ತಿತ್ವ ಕಳೆದುಕೊಂಡ ಮಹಿಳೆಯರು, ಪುರುಷರ ಕೈಗೊಂಬೆಯಾಗಿದ್ದರೆಂದು ಇತಿಹಾಸದ ಪುಟಗಳಲ್ಲಿ ನೋಡಬಹುದೆಂದು ಕವಿತಾ ಅವರು ಹೇಳುತ್ತಾರೆ. ವಸಾಹತುಶಾಹಿ ಪ್ರವೇಶ ಮತ್ತು ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ಮಹಿಳೆಯರು ಶಿಕ್ಷಣ ಪಡೆದರು. ಎಲ್ಲಾ ರಂಗಗಳಲ್ಲೂ ತಮ್ಮ ಅಸ್ಮಿತೆಯ ನೆಲೆಯನ್ನು ಹುಡುಕಾಡಿದರು. ಆದ್ದರಿಂದಲೇ ಪಾಶ್ಚಾತ್ಯ ಶಿಕ್ಷಣವು ಮಹಿಳೆಯ ಬೆಳವಣಿಗೆಗೆ ಕಾರಣವಾಗಿದೆ. ಇದರಿಂದ ಪಾಶ್ಚಾತ್ಯ ಶಿಕ್ಷಣದ ಕಡೆ ಅವರು ಒಲವನ್ನು ವ್ಯಕ್ತಪಡಿಸಿದ್ದಾರೆ. ಅಡಿಗೆ ಮನೆಗೆ ಹಾಗೂ ಪುರುಷರ ಭೋಗವಸ್ತುವಾಗಿ ಸೀಮಿತಳಾಗಿದ್ದ ಮಹಿಳೆಯರು ಶಿಕ್ಷಣದ ಮೂಲಕ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿ ಕುಟುಂಬವನ್ನು ಇನ್ನಷ್ಟು ಸದೃಢಗೊಳಿಸಿಕೊಂಡರು ಎಂದು ಅವರು ಹೇಳುತ್ತಾರೆ.

ಕವಿತಾ ರೈರವರು ಜಾಗತೀಕರಣದ ರಾಜಕೀಯ ಅವಕಾಶದ ಮುಕ್ತನೀತಿಯು ಪುರುಷ ಮತ್ತು ಮಹಿಳೆಯರಲ್ಲಿ ತೀವ್ರವಾದ ಪೈಪೋಟಿಗೆ ಕಾರಣವಾಗಿದೆ ಎಂಬ ಪ್ರಚಲಿತವಿರುವ ಅಭಿಪ್ರಾಯವನ್ನು ಕವಿತಾ ಅವರು ಒಪ್ಪುವುದಿಲ್ಲ. ಹೆಚ್ಚು ಭಾರತೀಯ ಮಹಿಳೆಯರು ಪ್ರಾಥಮಿಕ ಶಿಕ್ಷಣದಿಂದ ವಂಚಿತರಾದವರು ಹಾಗೂ ಮೇಲ್ವರ್ಗದ ಮಹಿಳೆಯರ ರಾಜಕೀಯ ಅಧಿಕಾರದಲ್ಲಿ ಸಂಪೂರ್ಣವಾಗಿ ಪುರುಷ ನಿರೂಪಿತವಾಗಿದೆ ಎಂದು ಅವರು ಭಾವಿಸುತ್ತಾರೆ. ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ, ಮಂಡಲ ಪಂಚಾಯಿತಿಯಲ್ಲಿ ಕಂಡು ಬರುವ ಮಹಿಳೆಯರನ್ನು ಪುರುಷ ವ್ಯವಸ್ಥೆಯು ನಿಯಂತ್ರಿಸುತ್ತಿರುವುದನ್ನು ಅವರು ವಿರೋಧಿಸುತ್ತಾರೆ. ಆದರೆ ವಾಸ್ತವವಾಗಿ ಮಹಿಳಾ ಪ್ರತಿನಿಧಿಗಳೆಲ್ಲರೂ ಮಹಿಳೆಯರಿಗಾಗಿಯೇ ಎನ್ನುವಂತೆ ಮಾಧ್ಯಮಗಳು ಬಿಂಬಿಸಿರುವುದು ಅವರ ಅಭಿಪ್ರಾಯ. ರಾಜಕೀಯದಲ್ಲಿ ಮಹಿಳೆಯರಿಗೆ ಸ್ವಾತಂತ್ರವಾಗಿ ತಮ್ಮನ್ನು ಗುರುತಿಸಿಕೊಳ್ಳಲು ಅನುವುಮಾಡಿಕೊಡುವ ಮುಕ್ತ ವ್ಯವಸ್ಥೆಯನ್ನು ಅವರು ಬಯಸುತ್ತಾರೆ.

## ೪.೭ ಹೊಸ ತಲೆಮಾರಿನ ವಿಮರ್ಶಕರ ತೌಲನಿಕ ವಿಶ್ಲೇಷಣೆ

* ವಿಸಾಜಿಯವರು ಬರಹಗಾರ ಮತ್ತು ಬರವಣಿಗೆಯ ಮೂಲಕ ಸಮಾಜವನ್ನು ಹಾಗೂ ಜಡ್ಡುಗಟ್ಟಿದ ವ್ಯವಸ್ಥೆಯನ್ನು ಬದಲಾಯಿಸಬೇಕೆಂದು ಹೇಳುತ್ತಾರೆ. ನಮ್ಮ ಸಮಾಜದಲ್ಲಿ ಅನೇಕ ವರ್ಗದ ಜನರಿದ್ದಾರೆ. ಆದರೆ ಕೆಳವರ್ಗದಲ್ಲಿ ಮಾತ್ರ ನೋವಿದೆ ಮೇಲ್ವರ್ಗದಲ್ಲಿ ನೋವು ಇಲ್ಲವೆಂದು ಗ್ರಹಿಸಿದರೆ ತಪ್ಪಾಗುತ್ತದೆ. ಬರಹಗಾರರಾದವರು ಸಮಾಜವನ್ನು ಸೂಕ್ಷ್ಮವಾಗಿ ಗ್ರಹಿಸಿ ವ್ಯವಸ್ಥೆಯನ್ನು ತಿದ್ದಬೇಕೆಂದು ವಿಸಾಜಿ ಹೇಳಿದರೆ, ಪುಟ್ಟಯ್ಯನವರು ದಲಿತ ಸಮಾಜದಲ್ಲಿನ ಏರುಪೇರುಗಳನ್ನು ಮುಖ್ಯವಾಗಿ ಗ್ರಹಿಸುತ್ತಾರೆ. ಕೆಲವು ದಲಿತರು ಮೇಲುಸ್ತರಕ್ಕೆ ಬಂದು ಕೆಳಸ್ತರದ ದಲಿತರನ್ನು ಕಡೆಗಾಣಿಸುವುದನ್ನು ಅವರು ತಮ್ಮ ಲೇಖನದಲ್ಲಿ ವಿಮರ್ಶಿಸುತ್ತಾರೆ. ದಲಿತ ಸಮಾಜದ ಸಂವೇದನೆಗಳಿಗೆ ಪುಟ್ಟಯ್ಯ ಅವರ ಬರವಣಿಗೆಯು ಸೀಮಿತವಾಗಿದೆ. ಜೋಗಿಯವರು ಸಮಾಜವನ್ನು ಗ್ರಹಿಸುವ ಪರಿಯೇ ವಿಶಿಷ್ಟವಾಗಿದೆ. ಕುವೆಂಪು 'ಹೋಗುವನು ನಾ ಮಲೆನಾಡಿಗೆ' ಎಂದು ಹೇಳಿ ಮೈಸೂರಿನಲ್ಲೇ ಉಳಿದುಕೊಂಡರು. ಆದರೆ ತೇಜಸ್ವಿ ಆಧುನಿಕತೆಯಿಂದ ದೂರಸರಿದು ಮೂಡಿಗೆರೆ ಸೇರಿದ್ದು ಆದರ್ಶವಾದ ಬದುಕು ಎಂಬುದಾಗಿ ಸಮಾಜದೊಳಗಿನ ಜೀವನ ಕ್ರಮದ ವೈರುಧ್ಯವನ್ನು ಅವರು ತಿಳಿಸುತ್ತಾರೆ. ಹರೀಶ್‌ರವರು ಬರಹಗಾರರಾದವರು ಸಮಕಾಲೀನ ಬದುಕಿನ ಏರಿಳಿತಗಳಿಗೆ ಸ್ಪಂದಿಸಿ ತಲ್ಲಣವನ್ನ ಜನಜೀವನವನ್ನು ಕಟ್ಟಿಕೊಡಬೇಕೆಂದು ಹೇಳುತ್ತಾರೆ. ಈ ನಾಲ್ವರು ವಿಮರ್ಶಕರು ಬರಹಗಾರರಾಗಿ ವಿಭಿನ್ನ ನೆಲೆಗಳಲ್ಲಿ ಸಮಾಜವನ್ನು ಗ್ರಹಿಸಿರುವುದನ್ನು ಗಮನಿಸಬಹುದು.

* ಕವಿತಾ ರೈ ಜಾಗತೀಕರಣದ ಸಂದರ್ಭದಲ್ಲಿ ಮಹಿಳೆಯರಲ್ಲಾದ ಬದಲಾವಣೆಗಳನ್ನು ಸಮಾಜವು ಹೇಗೆ ನೋಡಿದೆ ಎಂಬುದನ್ನು ತಿಳಿಸುತ್ತಾರೆ. ಹರೀಶ್‌ರವರು ದೇವಚಂದ್ರನೆಂಬ ಕವಿಯ ಮೂಲಕ ಸಮನ್ವಯ ಸಮಾಜವನ್ನು ವಸಾಹತುಶಾಹಿಯ ಪ್ರವೇಶ ಸಮಾಜದಲ್ಲಿ ಮಾಡಿದ ಬದಲಾವಣೆಗಳನ್ನು ತಿಳಿಸುತ್ತಾರೆ. ಕವಿತಾ ರೈ ಮಹಿಳೆಯ ಅಸ್ತಿತ್ವದ ನೆಲೆಯಲ್ಲಿ ಜಾಗತೀಕರಣಗೊಂಡ ಸಮಾಜವನ್ನು ಗ್ರಹಿಸಿದರೆ, ಹರೀಶ್‌ರವರು ಬ್ರಿಟಿಷರ ಪ್ರಭಾವದಿಂದ ಕವಿಯೊಬ್ಬ ಧರ್ಮದ ಆಚೆ ಬಂದು ಸಮಾನತೆಯ ಸಮಾಜವನ್ನು ಕಟ್ಟಿಕೊಟ್ಟಿರುವುದನ್ನು ತಿಳಿಸುತ್ತಾರೆ. ಜಾಗತೀಕರಣದ ನೆಲೆಯಲ್ಲಿ ಸ್ತ್ರೀಯರ ಸಮಸ್ಯೆಗಳನ್ನು ಗ್ರಹಿಸಿದರೆ, ಹರೀಶ್‌ರವರಲ್ಲಿ ಕೃತಿಯ ಮೂಲಕ ಎಲ್ಲಾ ಸಾಮಾನ್ಯ ವರ್ಗ, ಧರ್ಮಗಳ ಜೀವನ ಕ್ರಮವನ್ನು ತಿಳಿಸುವ ವಿಶಾಲ ಜೀವನ ಧೋರಣೆ ಅವರಲ್ಲಿ ಕಂಡುಬರುತ್ತದೆ.

* ವಿಸಾಜಿ ಲೇಖಕರ ಮೂಲಕ ಸಮಾಜವನ್ನು ದರ್ಶನ ಮಾಡಿದರೆ. ಜೋಗಿಯವರು ಕುವೆಂಪು–ತೇಜಸ್ವಿಯರ ನಡುವಿನ ಅನುಕರಣೆ ಹಾಗೂ ಪತ್ರಕರ್ತರ ನೈತಿಕ ಮೌಲ್ಯಗಳ ಮೂಲಕ ಸಮಾಜವನ್ನು ಅರ್ಥೈಸುವರು. ವಿಸಾಜಿಯವರಲ್ಲಿ ಹೈದ್ರಾಬಾದ್ ಕರ್ನಾಟಕದ

ಜನಜೀವನದ ಬಗ್ಗೆ ಪ್ರಾದೇಶಿಕ ನೆಲೆಯಲ್ಲಿ ಸಮಾಜವನ್ನು ಕಾಣುವ ಮನೋಭಾವವಿದೆ. ತಾರಿಣಿಯವರು ಕೆಲವೊಂದು ಲೇಖನದಲ್ಲಿ ಚಿತ್ರದುರ್ಗ ಮತ್ತು ದಾವಣಗೆರೆ ಭಾಗದ ಸಮಾಜವನ್ನು ಸಾಹಿತ್ಯಿಕವಾದ ನೆಲೆಯಲ್ಲಿ ಗ್ರಹಿಸಿರುವುದನ್ನು ಕಾಣಬಹುದಾಗಿದೆ. ಕವಿತಾ ಮತ್ತು ತಾರಿಣಿಯವರು ಪುರಾಣ ಮತ್ತು ಚರಿತ್ರೆಯನ್ನು ಒಡೆಯುವ ಮೂಲಕ ಸಮಾಜವನ್ನು ಅರ್ಥೈಸುವ ಕ್ರಮ ವಿಶಿಷ್ಟವಾಗಿದೆ. ಅದರಲ್ಲೂ ಕವಿತಾ ಪುರಾಣದ ಮಿಥ್‌ಗಳನ್ನು ಪ್ರಾಚೀನ ಕಾಲದ ಅನಿಷ್ಟ ಆಚರಣೆಗಳ ಮೂಲಕ ಸ್ತ್ರೀಯ ಮೇಲೆ ಪುರುಷ ಸಮಾಜ ನಡೆಸಿದ ಕ್ರೌರ್ಯವನ್ನು ಪ್ರಸ್ತಾಪಿಸುತ್ತಾರೆ.

* ಸಮಾಜದಲ್ಲಿನ ಅವ್ಯವಸ್ಥೆಯನ್ನು ಸುಧಾರಿಸಿ ತಳ ಸಮುದಾಯದವರಿಗೆ ನ್ಯಾಯವನ್ನು ದೊರಕಿಸಿಕೊಡಬೇಕೆಂಬ ಚಿಂತನೆ ಜೋಗಿ ಹಾಗೂ ವಿಸಾಜಿಯವರಲ್ಲಿ ಕಂಡು ಬರುತ್ತದೆ. ದಲಿತರ ಸಮಾಜದಲ್ಲಿನ ವೈರುಧ್ಯಗಳನ್ನು ಹಾಗೂ ದಲಿತರೇ ದಲಿತರ ಶೋಷಣೆಯನ್ನು ಮಾಡುತ್ತಿರುವುದನ್ನು ಕೆಳಸ್ತರದ ನೆಲೆಯಲ್ಲಿ ಕೆಳವರ್ಗದ ಬದುಕನ್ನು ಪುಟ್ಟಯ್ಯನವರು ಕಟ್ಟಿಕೊಡುತ್ತಾರೆ. ಇಬ್ಬರು ವಿಮರ್ಶಕಿಯರು ಸ್ತ್ರೀವಾದಿ ನೆಲೆಯಲ್ಲಿ ಸಮಾಜವನ್ನು ವಿಮರ್ಶಿಸುತ್ತಾರೆ. ಜೋಗಿ ಸಾಹಿತ್ಯಿಕವಾಗಿ ಮತ್ತು ಬರಹಗಾರ, ಪತ್ರಕರ್ತರಾಗಿ ಚಾರಿತ್ರಿಕ ದೃಷ್ಟಿಯಿಂದ ಸಮಾಜದಲ್ಲಿನ ಸಾಮಾಜಿಕ ಸಮಸ್ಯೆಗಳನ್ನು ವಿಮರ್ಶಿಸಿದರೆ, ನಿರ್ಲಕ್ಷಿತ ಬರಹಗಾರರ ಹಾಗೂ ಕೃತಿಗಳ ಮೂಲಕ ಸಮಾಜವನ್ನು ಹರೀಶ್‌ರವರು ಕಟ್ಟಿಕೊಡುತ್ತಾರೆ. ಹರೀಶ್‌ರವರು ಸ್ವಲ್ಪ ಬಲಪಂಥೀಯ ಧೋರಣೆಯುಳ್ಳವರಾದರೆ, ಪುಟ್ಟಯ್ಯನವರು ಎಡಪಂಥೀಯ ಧೋರಣೆಯುಳ್ಳವರಾಗಿದ್ದಾರೆ.

* ಜೋಗಿಯವರು ಮೂಲತಃ ಪತ್ರಕರ್ತರಾಗಿರುವುದರಿಂದ ಸಮಾಜದೊಳಗಿನ ವ್ಯವಸ್ಥೆಯನ್ನು ತಿದ್ದುವುದು ಮುಖ್ಯವಾಗಿರುತ್ತದೆ. ಹಾಗಾಗಿಯೇ 'ಜಾನಕಿ ಕಾಲಂ'ನ ಪ್ರಮುಖ ಲೇಖನಗಳು ಸಮಾಜದಲ್ಲಿನ ಅಸಮಾನತೆಯ ಕುರಿತು ಮುಖಾಮುಖಿಯಾಗುತ್ತದೆ. ಹೊಸತಲೆಮಾರಿನ ವಿಮರ್ಶಕರು ಒಂದೇ ದೃಷ್ಟಿಕೋನದಲ್ಲಿ ಜನಸಾಮಾನ್ಯರ ಬದುಕನ್ನು ಅವರೆಲ್ಲ ಗ್ರಹಿಸಿದರೆ ಜೋಗಿಯವರು ಬಹುಮುಖಿ ನೆಲೆಯಲ್ಲಿ ಸಾಹಿತ್ಯ, ಸಿನಿಮಾ, ಸಂಸ್ಕೃತಿ, ರಾಜಕೀಯ, ಆರ್ಥಿಕ ಮುಂತಾದ ನೆಲೆಗಳಲ್ಲಿ ಆಕರ್ಷಕವಾಗಿ, ಕಥನಾತ್ಮಕವಾಗಿ ಹೇಳುವ ಕಲೆಗಾರಿಕೆ ಅವರಿಗೆ ಇರುವುದನ್ನು ಗಮನಿಸಿಬಹುದಾಗಿದೆ. ತಾರಿಣಿಯವರು ಸ್ತ್ರೀವಾದಿ ವಿಮರ್ಶೆಗೆ ತಮ್ಮನ್ನು ಸೀಮಿತವಾಗಿಸಿಕೊಂಡಿಲ್ಲ. ಎಲ್ಲಾ ನೆಲೆಯಲ್ಲೂ ಸಾಹಿತ್ಯವನ್ನು ನೋಡುತ್ತಾರೆ. ಆದರೆ ಕವಿತಾ ರವರ ಹೆಚ್ಚು ಲೇಖನಗಳಲ್ಲಿ ಸ್ತ್ರೀಪರ ಕಾಳಜಿ, ಸಮಾಜದೊಳಗಿನ ಅಸ್ತಿತ್ವದ ಕುರಿತು ತಲ್ಲಣಗಳು ಇರುವುದನ್ನು ಗಮನಿಸಬಹುದಾಗಿದೆ. ಅದರಲ್ಲೂ ತಾರಿಣಿಯವರಿಗಿಂತ ಹೆಚ್ಚಾಗಿ ಸ್ತ್ರೀ ಅಸ್ಮಿತೆಯ ಕುರಿತು ಕವಿತಾ ಸಮಾಜದೊಂದಿಗೆ ಮುಖಾಮುಖಿಯಾಗುವರು.

**ಟಿಪ್ಪಣಿಗಳು:**

೧. ವಿಕ್ರಮ ವಿಸಾಜಿ, ಬೆಳಗಿನ ಮುಖ, ಪು.೨

೨. ಅದೇ, ಪು.೨

೩. ಅದೇ, ಪು.೫

೪. ಅದೇ, ಪು.೧೦

೫. ಬಿ.ಎಂ. ಪುಟ್ಟಯ್ಯ, ಕದಡು, ಪು.೩

೬. ಅದೇ, ಪು.೧೦

೭. ಅದೇ, ಪು.೩೫

೮. ಅದೇ, ಪು.೪೭

೯. ಜೋಗಿ, ಜಾನಕಿ ಕಾಲಂ, ಪು.೫೪.

೧೦. ಅದೇ, ಪು.೮೫

೧೧. ತಾರಿಣಿ ಶುಭದಾಯಿನಿ, ಹೆಡೆಯಂತಾಡುವ ಸೊಡರು, ಪು.೧೮

೧೨. ಅದೇ, ಪು.೩೫

೧೩. ಜಿ.ಬಿ. ಹರೀಶ್, ಬೆಳಕಿನಾಟ, ಪು.೧೬

೧೪. ಕವಿತಾ ರೈ, ಅರಿವಿನ ನಡೆ, ಪು.೨

೧೫. ಅದೇ, ಪು.೩

೧೬. ಅದೇ, ಪು.೪

# ಅಧ್ಯಾಯ ೫

# ಹೊಸ ತಲೆಮಾರಿನ ವಿಮರ್ಶಕರು : ಸಾಹಿತ್ಯದ ಪರಿಕಲ್ಪನೆ

## ೫.೧. ವಿಕ್ರಮ ವಿಸಾಜಿ : ಸಾಹಿತ್ಯದ ಪರಿಕಲ್ಪನೆ

ಹೊಸ ತಲೆಮಾರಿನ ವಿಮರ್ಶಕರು ಸಾಹಿತ್ಯದ ಪರಿಕಲ್ಪನೆಯ ಬಗ್ಗೆ ಹೊಂದಿರುವ ದೃಷ್ಟಿ ಯಾವ ಬಗೆಯದು, ಒಬ್ಬರಿಗಿಂತ ಒಬ್ಬರು ಸಾಹಿತ್ಯದ ಪರಿಕಲ್ಪನೆಯ ಕುರಿತು ಹೊಂದಿರುವ ಭಿನ್ನತೆಯನ್ನು ಅರಿಯುವುದು ಮುಖ್ಯವಾಗಿದೆ.

ವಿಸಾಜಿ ಬರಹವು ಲೇಖಕರಿಗೆ, ವಿಮರ್ಶಕರಿಗೆ ಎಷ್ಟೊಂದು ಮುಖ್ಯವೆಂಬುದನ್ನು ಅರ್ಥೈಸಲು ಕೆಲವು ಪ್ರತಿಮೆಗಳನ್ನು ಬಳಸಿಕೊಂಡಿದ್ದಾರೆ. ಉದಾ: 'ಟೈಟಾನಿಕ್' ಸಿನಿಮಾದಲ್ಲಿ 'ಹಲಗೆ'ಯ ಮೂಲಕ ಬದುಕುವ ನಾಯಕಿ. ಇಂತಹ ಸಾಮಾನ್ಯವಾದ ಹಲಗೆ ನಾಯಕಿಯ ಜೀವ ಉಳಿಸಿ ಬದುಕಿನ ತೀರಕ್ಕೆ ಮುಟ್ಟಿಸಿತು. ಬರಹವು ಸಹ ನೊಂದವರ, ನಿರ್ಗತಿಕರ ಸಮಾಜದ, ಮುಂತಾದ ನೆಲೆಗಳಲ್ಲಿ ಸಮಸ್ಯೆ ಹುಟ್ಟು ಹಾಕದೆ ಜೀವಂತಿಕೆಯನ್ನು ಕಟ್ಟಿಕೊಡಬೇಕೆಂದು ವಿಸಾಜಿ ಹೇಳುತ್ತಾರೆ. ಅಷ್ಟೇ ಅಲ್ಲದೆ ವಿಜ್ಞಾನದ ಪದಗಳನ್ನು ಸಾಂಕೇತಿಕವಾಗಿ ಬಳಸಿಕೊಳ್ಳುವ ಮೂಲಕ ಬರಹದ ವ್ಯಾಪಕತೆಯನ್ನು ಅವರು ತಿಳಿಸುತ್ತಾರೆ. ಉದಾ: ಪರಮಾಣುಶಕ್ತಿ, ಮಿಲಿಟರಿ ಶಕ್ತಿ. ಹೀಗೆ ವಿಸಾಜಿಯವರು ಅನೇಕ ಪ್ರತಿಮೆಗಳನ್ನು ಬಳಸಿಕೊಳ್ಳುವುದರ ಮೂಲಕ ಸಾಹಿತ್ಯವನ್ನು ವಿಶ್ಲೇಷಣೆ ಮಾಡುತ್ತಾರೆ.

ತಾತ್ವಿಕತೆಯನ್ನು ರೂಪಿಸಿಕೊಳ್ಳುವ ಕುರಿತು ವಿಸಾಜಿ ಈ ರೀತಿ ಹೇಳುತ್ತಾರೆ: "ನಮ್ಮ ಬದುಕು, ಸಾಂಸ್ಕೃತಿಕ ಪರಿಸರ, ಓದು ಇವುಗಳಿಂದ ನಾವು ಕಟ್ಟಿಕೊಳ್ಳುವ ನಮ್ಮದೇ ಆದ ತಾತ್ವಿಕತೆ ಇದು ಸೃಜನಶೀಲತೆಯ ದೃಷ್ಟಿಯಿಂದ ಹೆಚ್ಚು ಮಹತ್ವದ್ದು ಇಂಥದ್ದು ಸುಲಭವಾಗಿ ದರ್ಶಿತವಾಗುವುದಿಲ್ಲ ಎಂಬುದು ನಿಜ. ಆದರೆ ಇದನ್ನು ದಕ್ಕಿಸಿಕೊಳ್ಳದೆ ಇದ್ದರೆ ಲೇಖಕನಿಗೆ ಮುಕ್ತಿಯಿಲ್ಲ. ಅಲ್ಲದೆ ತಾತ್ವಿಕತೆಗಳು ಆಯಾ ದೇಶದ ನೆಲದಿಂದಲೇ ರೂಪುಗೊಳ್ಳಬೇಕು."[೧] ಪ್ರತಿಯೊಬ್ಬ ಬರಹಗಾರರು ತಮ್ಮದೇ ತಾತ್ವಿಕ ನೆಲೆಯಿಂದ ಸಾಹಿತ್ಯ ಕೃತಿಯೊಂದನ್ನು ನೋಡಬೇಕು. ಆ ಮೂಲಕ ಮಾತ್ರ ತಮ್ಮದೇ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆ. ಆ ಮೂಲಕ ಕೃತಿಯನ್ನು ಇನ್ನೂ ಹೆಚ್ಚು ಆಳವಾಗಿ ಒಂದು ತತ್ವಕ್ಕೆ ಅಳವಡಿಸಿ ಅಭ್ಯಸಿಸಿ

ಮೌಲ್ಯ ನಿರ್ಣಯಿಸಬಹುದು. ಆಗ ಅದು ಹೆಚ್ಚು ಸತ್ವಯುತವಾಗಿರುತ್ತದೆ. ಆದರೆ ಈ ರೀತಿಯ ತಾತ್ವಿಕತೆಗೆ ಮುಖಾಮುಖಿಯಾಗದ ಬರಹಗಾರರು ಸಾಹಿತ್ಯಿಕವಾಗಿ ಬೆಳೆಯಲು ಆಗುವುದಿಲ್ಲವೆಂಬುದು ವಿಸಾಜಿಯವರ ಅಭಿಪ್ರಾಯವಾಗಿದೆ. ಪ್ರತಿಯೊಬ್ಬ ವಿಮರ್ಶಕರಿಗೂ ಸಾಹಿತ್ಯ ಪ್ರವೇಶಿಸುವ ಮುನ್ನ ತಮ್ಮದೇ ಆದ ದೃಷ್ಟಿಕೋನ ಮುಖ್ಯ ಎಂದು ವಿಸಾಜಿ ಭಾವಿಸುತ್ತಾರೆ.

ಹೊಸ ತಲೆಮಾರಿನ ಲೇಖಕರು ಹಿಂದಿನವರು ಬಳಸಿದ ಟಿಪಿಕಲ್ ಸಂಕೇತಗಳಿಂದ ಹೊರಬರಬೇಕೆಂದು ವಿಸಾಜಿ ಹೇಳುತ್ತಾರೆ. ಉದಾ: ಆಲದಮರ ಎಂದರೆ ಸಂಪ್ರದಾಯ, ಹಾವು ಎಂದರೆ ಕಾಮ ಇತ್ಯಾದಿ. ಹಳೆಯ ವಿಮರ್ಶಕರು ರೂಪಿಸಿದ ಸಂಕೇತಗಳಿಂದ ಹೊರಬಂದು ಹೊಸ ರೀತಿಯ ಸಂಕೇತಗಳನ್ನು ಸೃಷ್ಟಿಸಿ ಕಾವ್ಯರಚನೆ ಮಾಡಬೇಕು. ಅಲ್ಲದೆ ಹೊಸ ನುಡಿಗಟ್ಟುಗಳನ್ನು ರೂಪಿಸುವ ಅವುಗಳನ್ನು ಕಾವ್ಯಕ್ಕೆ ಒಗ್ಗಿಸುವ ಕೆಲಸ ಆಗಬೇಕು. ಮುಂದೆ ಇವು ಮನುಷ್ಯ ಜನಾಂಗದ ಯಾವ ಸತ್ಯವನ್ನು ದರ್ಶಿಸುತ್ತವೆ ಎಂಬ ನೆಲೆಯಲ್ಲಿ ಪ್ರತಿಮೆಗಳ ಮೂಲಕ ಸಾಹಿತ್ಯವನ್ನು ಅರ್ಥೈಸಬೇಕು. ಈ ರೀತಿಯಾಗಿ ಹೊಸತನಕ್ಕೆ ತುಡಿಯುವ ಲೇಖಕರು ಮಾತ್ರ ಸೃಜನಶೀಲ ಸಾಹಿತ್ಯ ಕೃತಿಯನ್ನು ಬರೆಯಲು ಸಾಧ್ಯ ಎಂಬುದು ವಿಕ್ರಮ ಅವರ ಅಭಿಪ್ರಾಯವಾಗಿದೆ.

ಹಿಂದಿನ ಬರಹಗಾರರು ತಮ್ಮನ್ನು ಹೆಚ್ಚಾಗಿ ಕಥೆ, ಕಾದಂಬರಿ, ನಾಟಕ, ವಿಮರ್ಶೆಯಲ್ಲಿ ತೊಡಗಿಸಿಕೊಂಡು ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದರು. ನಂತರ ಬಂದ ಹೊಸ ತಲೆಮಾರಿನವರ ಬರವಣಿಗೆಗಳು ಎರಡು–ಮೂರು ಕೃತಿಗಳು ಪ್ರಕಟವಾದ ಮೇಲೆ ನಿಂತು ಹೋದದ್ದರ ಕುರಿತು ವಿಸಾಜಿಯವರು ಆತಂಕ ವ್ಯಕ್ತಪಡಿಸುತ್ತಾರೆ. ನಿಜವಾದ ಬರಹಗಾರರು ಸಾಹಿತ್ಯ ಚಟುವಟಿಕೆಯಲ್ಲಿ ನಿರಂತರವಾಗಿ ತೊಡಗಿಕೊಂಡಿರಬೇಕು. ಆಗ ಮಾತ್ರ ಏನನ್ನಾದರೂ ಸಾಧಿಸಲು ಸಾಧ್ಯ. ಅಂತಹ ಕ್ರಿಯಾಶೀಲ ಬರಹಗಾರರು ಮಾತ್ರ ನಮ್ಮ ನಡುವೆ ಹೆಚ್ಚು ಕಾಲ ಉಳಿಯುತ್ತಾರೆ ಎಂದು ವಿಸಾಜಿ ಭಾವಿಸುತ್ತಾರೆ. ಬರಹಗಾರರು ನಿರಂತರವಾಗಿ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡರೆ ಮಾತ್ರ ಯಶಸ್ಸು ಸಾಧಿಸಲು ಸಾಧ್ಯವಾಗುತ್ತದೆ ಎಂಬುದು ಅವರ ನಿಲುವಾಗಿದೆ.

'ಹೈದ್ರಾಬಾದ್ ಕರ್ನಾಟಕದ ಹೊಸಗನ್ನಡ ಕಾವ್ಯ' ಎಂಬ ತಮ್ಮ ಲೇಖನದಲ್ಲಿ ವಿಕ್ರಮ ವಿಸಾಜಿಯವರು ಹೇಳುವ ಪ್ರಕಾರ. ಧಾರವಾಡ, ಮಂಗಳೂರು, ಮೈಸೂರು ಭಾಗದ ಲೇಖಕರು ತಮ್ಮ ಕಾವ್ಯದ ಜೊತೆಯಲ್ಲೇ ವಿಮರ್ಶೆಯನ್ನೂ ಮಾಡಿದರು. ಆದರೆ ಹೈದ್ರಾಬಾದ್ ಕರ್ನಾಟಕದ ಲೇಖಕರು ಇಂಥ ಪ್ರಯತ್ನಗಳನ್ನು ಮಾಡಲಿಲ್ಲ. ಒಂದು ಕಾಲದಲ್ಲಿ ಹಳಗನ್ನಡ ಸಾಹಿತ್ಯದ

ಉತ್ಕೃಷ್ಟ ಕೃತಿಗಳು ಪ್ರಕಟವಾಗಿದ್ದವು ; ವಚನ ಸಾಹಿತ್ಯ, ದಾಸಸಾಹಿತ್ಯ ಬಂದದ್ದು ಇಲ್ಲಿಂದಲೇ. ಆದರೆ ಏಕೋ ಈ ಭಾಗದ ಲೇಖಕರು ಮುಂದಿನ ದಿನಗಳಲ್ಲಿ ಸಾಹಿತ್ಯಿಕವಾಗಿ ತಮ್ಮನ್ನು ತೊಡಗಿಸಿಕೊಳ್ಳಲಿಲ್ಲ. ಪುನರಾವಲೋಕನೆಯ ಮಾತಿರಲಿ ಸರಿಯಾದ ದಾಖಲೆಯನ್ನು ಸಹ ಇಡಲಿಲ್ಲ. ವಿಕ್ರಮ ವಿಸಾಜಿಯವರು ಈ ಭಾಗದವರೇ ಆಗಿರುವುದರಿಂದ ಅವರ ಸಾಂಸ್ಕೃತಿಕ ಕಾಳಜಿ ಅರ್ಥವಾಗುತ್ತದೆ. ಈ ಭಾಗದಲ್ಲಿ ಸಾಹಿತ್ಯ ರಚನೆಯಾಗದೆ ಇರಲು ಕಾರಣಗಳನ್ನು ಅರಿತು ಅದನ್ನು ನಿವಾರಿಸಿಕೊಂಡು ನಮ್ಮ ತಲೆಮಾರಿನವರು ಸಾಹಿತ್ಯವನ್ನು ರಚಿಸಬೇಕೆಂಬ ಬಯಕೆಯನ್ನು ಅವರು ವ್ಯಕ್ತಪಡಿಸುತ್ತಾರೆ.

### ೫.೨. ಬಿ.ಎಂ. ಪುಟ್ಟಯ್ಯ : ಸಾಹಿತ್ಯದ ಪರಿಕಲ್ಪನೆ

ಬಿ.ಎಂ. ಪುಟ್ಟಯ್ಯ ಅವರು 'ಶ್ರೀ ವಿಶ್ವನಾಥ ಭೂಪಂಗೆ ಕರುಣಿಸಿ ಸಕಲ ಸಾಮ್ರಾಜ್ಯ ವಿತ್ತಾತನಂ ಮೆರೆದ ಕೃತಿ ಪುಣ್ಯದಾಕೃತಿಯಿದು'[೨] ಎಂದು ಹೇಳುವ ರಾಘವಾಂಕ ಕವಿಯು ಇತಿಹಾಸದ ಕಥನಗಳನ್ನು ಹೇಳುವೆ ಕಾವ್ಯದೊಳಗೆ ಎನ್ನುತ್ತಲೇ ಹರಿಶ್ಚಂದ್ರನನ್ನು ಮೆರೆದ ಪುಣ್ಯದ ಕೃತಿ ಎಂದು ಹೇಳುವ ಸಾಲುಗಳಲ್ಲಿನ ವೈರುಧ್ಯವನ್ನು ಗುರುತಿಸುತ್ತಾರೆ. ಹಲವು ಇತಿಹಾಸ ಕಥನಗಳನ್ನು ಹೇಳುವೆ ಎನ್ನುವುದು ಕೇವಲ ತೋರಿಕೆಯಾಗಿದ್ದು, ಹರಿಶ್ಚಂದ್ರನನ್ನೇ ಕೇಂದ್ರ ಆಸಕ್ತಿಯಾಗಿ ನೋಡಿರುವ ಕ್ರಮದ ಹಿಂದೆ ಮೇಲ್ವರ್ಗದ ಹುನ್ನಾರವಿದೆಯೆಂದು ಅವರು ಗ್ರಹಿಸುತ್ತಾರೆ. ರಾಘವಾಂಕನ ಕೃತಿಯಲ್ಲಿ ಹೀಗೆ ಅನೇಕ ವೈರುಧ್ಯಗಳನ್ನು ಗುರುತಿಸಿರುವ ಅವರು ಕವಿಯಲ್ಲಿರುವ ರಾಜತ್ವದ ಪ್ರೀತಿಯನ್ನು ಟೀಕಿಸುತ್ತಾರೆ. ಸಾಮಾನ್ಯ ವ್ಯಕ್ತಿಗಳ ಬದುಕು, ಕಾಶಿರಾಜನ ಮಗನ ಸಾವು ನಮಗೆ ಮುಖ್ಯವಾಗುತ್ತದೆ ಎಂಬುದು ಅವರ ಅಭಿಪ್ರಾಯವಾಗಿದೆ. ವಿಕ್ರಮ ವಿಸಾಜಿಯವರ 'ಬೆಳಗಿನ ಮುಖ' ಕೃತಿಯಲ್ಲಿ ಬರಹಗಾರರಾದವರಿಗೆ ರಾಜಕಾರಣಿಯ ಬದುಕು ಮುಖ್ಯವಾಗಬಾರದು. ಹಳ್ಳಿಯ ಮೂಲೆಯಲ್ಲಿರುವ ರೈತನ ಬದುಕು ಮುಖ್ಯವಾಗಬೇಕೆಂಬ ಭಾವ ವ್ಯಕ್ತವಾಗಿದೆ. ಇದೇ ತತ್ವ ಪುಟ್ಟಯ್ಯನವರಲ್ಲೂ ವ್ಯಕ್ತವಾಗಿರುವುದನ್ನು ನಾವು ಕಾಣಬಹುದಾಗಿದೆ.

ಕೃತಿಕಾರ ಹೇಳ ಹೊರಟಿರುವುದು ಸತ್ಯಹರಿಶ್ಚಂದ್ರನ ಕಥೆ. ಅವನಿಗೆ ಹರಿಶ್ಚಂದ್ರನ ಬದುಕು ಮುಖ್ಯವಾಗುತ್ತದೆಯೇ ಹೊರತು, ಬೇರೆಯವರ ಬದುಕಲ್ಲ. ಆದರೆ ಪುಟ್ಟಯ್ಯನವರು ಕೃತಿಯೊಳಗೆ ಲೋಹಿತಾಶ್ವನ ಸಾವು, ಚಂದ್ರಮತಿಯ ಶೋಕ ಹೇಗೆ ಮುಖ್ಯವೋ ಹಾಗೇ ಕಾಶಿರಾಜನ ಮಗನ ಸಾವು ಕೃತಿಕಾರನಿಗೆ ಮುಖ್ಯವಾಗಲಿಲ್ಲವೆಂದು ಅತೃಪ್ತಿಯನ್ನು ವ್ಯಕ್ತಪಡಿಸುತ್ತಾರೆ. ಕೃತಿಯ ರಚನಾಕಾರನಿಗೆ ಹರಿಶ್ಚಂದ್ರನ ಸಂಸಾರವೇ ಮುಖ್ಯವಾಗಿದೆ. ಆದರೆ ಸಾಮಾನ್ಯ ಜನರ ಬದುಕು ಕೃತಿಕಾರನಿಗೆ ಮುಖ್ಯವಾಗಬೇಕೆಂಬ ಅವನ ನಿಲುವು ಅಷ್ಟೊಂದು ಸಮಂಜಸವಲ್ಲವೆಂದೇ

ತೋರುತ್ತದೆ. ಈ ರೀತಿಯಾಗಿ ಸಾಹಿತ್ಯ ಕೃತಿಯೊಂದನ್ನು ಭಿನ್ನವಾಗಿ ಆಲೋಚಿಸುವ ಅವರ ಕ್ರಮವು, ಹೊಸ ರೀತಿಯ ಚಿಂತನೆಗಳಿಗೆ ಅನುವು ಮಾಡಿಕೊಡುತ್ತದೆ.

ಹರಿಶ್ಚಂದ್ರ ಮತ್ತು ಆತನ ಕುಟುಂಬದವರಿಗೆ ವಿಶ್ವಾಮಿತ್ರನಿಂದ ಭೌತಿಕನಷ್ಟಗಳಾದವು ಎಂದು ಕೃತಿ ಮಂಡಿಸುತ್ತಾ ಹೋಗುವುದನ್ನು ಪುಟ್ಟಯ್ಯ ಅವರು ಹೇಳುತ್ತಾರೆ. ಹರಿಶ್ಚಂದ್ರನ ಕುಟುಂಬವನ್ನು ಕೇಂದ್ರಕ್ಕೆ ತಂದು ಅವರಿಗಾದ ಭೌತಿಕ ನಷ್ಟಗಳನ್ನು ಕೃತಿ ಹೇಳುತ್ತದೆ. ಮೊದಲು ಹರಿಶ್ಚಂದ್ರನ ರಾಜ್ಯ ಹೋಗುತ್ತದೆ. ಅಂದರೆ ಸಂಪತ್ತು ಮತ್ತು ಅಧಿಕಾರದಿಂದ ಹರಿಶ್ಚಂದ್ರನನ್ನು ಕುಟುಂಬ ಸಮೇತ ಪತ್ಯ ಬೇರ್ಪಡಿಸುವುದನ್ನು ಅವರು ಗುರುತಿಸುತ್ತಾರೆ. ಪ್ರತಿ ಘಟ್ಟಕ್ಕೂ ತನ್ನನ್ನು ವಿಭಾಗಿಸಿಕೊಳ್ಳುತ್ತ ಮೇಲ್ವರ್ಗದವರನ್ನು ಎತ್ತರಕ್ಕೆ ಕೊಂಡೊಯ್ಯುವ ಗುಣವು ಕೃತಿಯಲ್ಲಿ ಪ್ರಕಟವಾಗಿದೆ. ಇಂತಹ ಕೃತಿಗಳು ಸಾಮಾಜಿಕ ಅಸಮಾನತೆಯನ್ನು ಹುಟ್ಟುಹಾಕುತ್ತವೆ ಎಂದು ಅವರು ಟೀಕಿಸುತ್ತಾರೆ. ಕೃತಿಯ ಪ್ರತಿಯೊಂದು ಸನ್ನಿವೇಶವು ಹರಿಶ್ಚಂದ್ರನ ನೆಲೆಯಲ್ಲಿ ಯೋಚಿಸುವುದನ್ನು ಬಿಟ್ಟು ಸರ್ವವ್ಯಾಪ್ತಿಯಾಗಿ ಪ್ರತಿಯೊಬ್ಬರ ಬದುಕನ್ನು ಕಟ್ಟಿಕೊಡಬೇಕೆಂಬುದು ಅವರ ಆಶಯ ಆಗಿದೆ.

"ನಿಗಿ ನಿಗಿ ಕೆಂಡದ ಭಾಗವಾಗಬೇಕು ಅಥವಾ ಕೆಂಡದಿಂದ ಹೊರಗೆ ನಿಂತು ಆ ಕೆಂಡವನ್ನು ನೋಡಬೇಕು"- ಇದು ಡಾ. ಕೆ.ವಿ.ನಾರಾಯಣ ಅವರು ದಲಿತ ಸಾಹಿತ್ಯದಲ್ಲಿ ಕುರಿತು ಹೇಳುವ ಮಾತು. ದಲಿತ ಸಾಹಿತ್ಯವನ್ನು ಕುರಿತು ಮಾತನಾಡುವಾಗ ಈ ಮಾತು ಬಹಳ ಮುಖ್ಯವಾಗುತ್ತದೆ ಎಂದು ಪುಟ್ಟಯ್ಯನವರು ಹೇಳುತ್ತಾರೆ. ದಲಿತ ಸಾಹಿತ್ಯಕ್ಕೆ ಮತ್ತು ಅದನ್ನು ಕುರಿತು ಮಾತನಾಡುವುದಕ್ಕೆ ಸಹಜವಾದ ಮತ್ತು ಅಷ್ಟೇ ತೀವ್ರವಾದ ಒಂದು ಘಾಟು ಇದೆ. ಆದರೆ ಇಂತಹ ಔಪಚಾರಿಕ ವೇದಿಕೆಗಳು ಹಾಗೂ ಔಪಚಾರಿಕ ಚರ್ಚೆಗಳು ಸಹಜವಾದ ಘಾಟನ್ನು ಕೃತಕವಾಗಿಸುತ್ತವೆ. ಇಂತಹ ಸಹಜ ತೀವ್ರತೆಯನ್ನು ಅಸಹಜಗೊಳಿಸುವ ವೇದಿಕೆಗಳು ನಮ್ಮೊಳಗಿನ ತೀವ್ರತೆಗಳನ್ನು ಕಸಿದುಕೊಳ್ಳುತ್ತವೆ ಎಂಬುದಾಗಿ ಪುಟ್ಟಯ್ಯನವರು ಹೇಳುತ್ತಾರೆ. ಇಂತಹ ದಲಿತ ಸಾಹಿತ್ಯದ ಬಗ್ಗೆ ಮಾತಾಡುವ ಪ್ರತಿಯೊಬ್ಬರು ಅಪಾಯ ಮತ್ತು ಮಿತಿಗಳನ್ನು ಅರಿತಿರಬೇಕೆಂದು ಎಚ್ಚರಿಸುತ್ತಾರೆ.

ದಲಿತ ಸಾಹಿತ್ಯದ ಅಭಿವ್ಯಕ್ತಿಯ ಕುರಿತು ಪುಟ್ಟಯ್ಯ ಅವರು ದಲಿತ ಸಾಹಿತ್ಯ ಎಂಬುದು ಕೇವಲ ಅಕ್ಷರಗಳಲ್ಲಿ ಭಾಷಿಕ ಅಭಿವ್ಯಕ್ತಿಗಳಲ್ಲಿ ಮಾತ್ರವೇ ಇಲ್ಲ. ದಲಿತ ಸಾಹಿತ್ಯವು ಲೈಬ್ರರಿ ಮತ್ತು ಎಸಿಗಳಲ್ಲಿ ಇಲ್ಲ. ಅದು ಹೋರಾಟದ ಹಾಡುಗಳ ಲೋಕದಲ್ಲಿ, ನೋವಿನ ಧ್ವನಿಯಾಗಿ ಅಕ್ಷರ ಲೋಕದ ಆಚೆ ನಿಲ್ಲುತ್ತದೆ ಎಂದು ಹೇಳುವ ಪುಟ್ಟಯ್ಯನವರು ದಲಿತ ಸಾಹಿತ್ಯದ ವ್ಯಾಖ್ಯೆಯನ್ನು ವಿಸ್ತರಿಸುತ್ತಾರೆ. ಆದರೆ ನಮ್ಮ ಅನೇಕ ಬರಹಗಾರರು ಅಕ್ಷರದ ಭಾಷಿಕ

ಅಭಿವ್ಯಕ್ತಿ ಮಾತ್ರವೇ ದಲಿತ ಸಾಹಿತ್ಯವೆಂಬುದಾಗಿ ಗುರುತಿಸಿರುವ ಕ್ರಮವನ್ನು ಅವರು ಅಲ್ಲಗಳೆಯುತ್ತಾರೆ. ಅನೇಕ ಹೋರಾಟದ ಹಾಡುಗಳನ್ನು ಬರೆದ ದಲಿತ ಬರಹಗಾರರ ಕುರಿತು ಅಕಾಡೆಮಿಕ್ ವಲಯದಲ್ಲಿ ಚರ್ಚೆಯಾಗದೇ ಇರುವುದರ ಕುರಿತು ಅವರು ಉಲ್ಲೇಖ ಮಾಡುತ್ತಾರೆ. ಬುದ್ಧಿಜೀವಿಗಳ ವಲಯ ನಯವಾಗಿ ದಲಿತ ಸಾಹಿತ್ಯವನ್ನು ಲಿಖಿತ ಸಾಹಿತ್ಯವಾಗಿ ನೋಡುವುದೇ ನೋಡುವುದೇ ಹೊರತು, ಅದರಾಚೆಗಿನ ದಲಿತ ಬದುಕಲ್ಲ ಎಂಬುದು ಅವರ ಅಭಿಪ್ರಾಯ. ಕನ್ನಡ ವಿಮರ್ಶೆಯಲ್ಲಿರುವ ಈ ಪ್ರವೃತ್ತಿಯನ್ನು ಪುಟ್ಟಯ್ಯ ವಿರೋಧಿಸುತ್ತಾರೆ.

ಕುವೆಂಪು ಸಾಹಿತ್ಯದ ಬಗ್ಗೆ ಇರುವ ಎರಡು ಭಿನ್ನ ಧೋರಣೆಗಳ ಕುರಿತು ಪುಟ್ಟಯ್ಯ ಹೀಗೆ ಹೇಳುತ್ತಾರೆ : "ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ನನಗೆ ಸಾಹಿತ್ಯಕ ಪ್ರೇರಣೆ ಎಂದೂ ದೇವನೂರು ಅವರು ಕುವೆಂಪು ಅವರ ಕಾವ್ಯ ನನ್ನ ಕಾವ್ಯಕ್ಕೆ ಪ್ರೇರಣೆ ಎಂದು ಸಿದ್ಧಲಿಂಗಯ್ಯನವರು ಹೇಳಿರುವ ಹೇಳಿಕೆಗಳು ಒಂದು ಕಡೆಗಿವೆ. ಕುವೆಂಪು ಅವರ ಒಡೇರ ದಿಣ್ಣೇಯ ಮೇಲೆ ನಿಂತು ದಲಿತರನ್ನು ಚಿತ್ರಿಸಿದ್ದಾರೆ ಎಂಬ ಬಿ.ಕೃಷ್ಣಪ್ಪನವರ ವಿಮರ್ಶಾ ಲೇಖನದ ಧೋರಣೆ ಮತ್ತೊಂದು ಕಡೆಗಿದೆ."[3] ಹೀಗೆ ಒಂದೇ ಸಾಹಿತ್ಯ ಪರಂಪರೆಯೊಳಗೆ ಎರಡು ಭಿನ್ನವಾದ ಚಿಂತನೆಗಳಿರುವ ವೈರುಧ್ಯ ಕುರಿತು ಅವರು ಪ್ರಸ್ತಾಪಿಸುತ್ತಾರೆ. ಒಂದು ಕಾಲಘಟ್ಟದಲ್ಲಿ ಕುವೆಂಪು ಸಾಹಿತ್ಯಗಳಿಂದ ಕೆಲವು ದಲಿತ ಕವಿಗಳು ಪ್ರೇರಣೆ ಪಡೆದರು. ಇನ್ನೊಂದು ಕಾಲಘಟ್ಟದಲ್ಲಿ ಅದೇ ಕುವೆಂಪು ಸಾಹಿತ್ಯದಲ್ಲಿ ದಲಿತ ವಿರೋಧಿ ನೆಲೆಯ ಚಿಂತನೆಗಳು ಬಂದಿರುವುದನ್ನು ಅವರು ವೈರುಧ್ಯದ ನೆಲೆಯಲ್ಲಿ ಗ್ರಹಿಸುತ್ತಾರೆ. ಆದರೆ ದಲಿತ ಚಳುವಳಿಯ ಪ್ರಭಾವವಿದ್ದ ಕಾಲದಲ್ಲಿ ಕೆಲವು ದಲಿತ ಚಿಂತಕರು ಮೇಲ್ವರ್ಗದವರ ಸಾಹಿತ್ಯವನ್ನು ಒಡೆದು ನೋಡುವ ಒತ್ತಡದಲ್ಲಿದ್ದರು ಎಂದು ಅವರು ಭಾವಿಸುತ್ತಾರೆ. ಈ ರೀತಿ ಹೊಸ ನೆಲೆಯಲ್ಲಿ ದಲಿತ ವಿರೋಧಿ ಲಕ್ಷಣವನ್ನು ಒಳಗೊಂಡಿರುವ ಸಾಹಿತ್ಯವನ್ನು ಓದುವ ವಲಯಕ್ಕೆ ಪರಿಚಯಿಸಿದ ದಲಿತ ಚಿಂತಕರನ್ನು ಪುಟ್ಟಯ್ಯನವರು ಆಪ್ತವಾಗಿ ನೋಡುತ್ತಾರೆ.

ಮೊದಲಿಗೆ ಅನೇಕ ಹಿರಿಯ ಸಂಶೋಧಕರು ಅಧ್ಯಯನದ ದೃಷ್ಟಿಯಿಂದ ಸಾಹಿತ್ಯ ಚರಿತ್ರೆಯನ್ನು ಕಾಲಘಟ್ಟಗಳಲ್ಲಿ ವಿಂಗಡಿಸಿ ಕವಿ, ಕೃತಿಗಳನ್ನು ಸೀಮಿತಗೊಳಿಸಿದ ಕ್ರಮವನ್ನು ಪುಟ್ಟಯ್ಯನವರು ವಿರೋಧಿಸುತ್ತಾರೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಮುಂತಾಗಿ ವಿಂಗಡಿಸಿರುವ ಕ್ರಮವನ್ನು ಅವರು ಪ್ರಶ್ನಿಸುತ್ತಾರೆ. ಶಿವರಾಮ ಕಾರಂತರನ್ನು, ಶಂಬಾ ಜೋಶಿಯವರನ್ನು ಆಧುನಿಕ ಸಾಹಿತ್ಯದ ಯಾವ ವಿಭಾಗದಲ್ಲಿ ಸೇರಿಸಬೇಕು? ಕಾರಂತರ ಬಿಡಿ ಬರಹಗಳನ್ನು ಒಳಗೊಂಡಂತೆ ಕಳೆದ ಶತಮಾನದ ವೈಚಾರಿಕ ಬರಹಗಳನ್ನು ಎಲ್ಲಿ ಸೇರಿಸಬೇಕು? ಎಂಬ ಪ್ರಶ್ನೆಯನ್ನು ಅವರು ಎತ್ತುತ್ತಾರೆ. ಈ ಮೂಲಕ ಹಿಂದಿನ ಸಾಹಿತ್ಯ ಪರಂಪರೆಯು ಹಾಕಿದ ಗೆರೆಯನ್ನು ಅಳಿಸಲು ಅವರು ಪ್ರಯತ್ನಿಸಿರುವಂತೆ ತೋರುತ್ತದೆ.

ಸಾಹಿತ್ಯ ಕೃತಿ ಮತ್ತು ಬರಹಗಾರನನ್ನು ಒಂದೇ ಕಾಲಘಟ್ಟದಲ್ಲಿ ಸೀಮಿತಗೊಳಿಸುವ ಕ್ರಮವನ್ನು ಪುಟ್ಟಯ್ಯ ಅವರು ಖಂಡಿಸುತ್ತಾರೆ. ಕೆಲವು ಸಾಹಿತಿಗಳನ್ನು ಕೆಲವು ಕೃತಿಗಳನ್ನು ಮತ್ತು ಕೆಲವು ಸಾಹಿತ್ಯ ಪ್ರಕಾರಗಳನ್ನು (ಉದಾ: ಲಲಿತ ಪ್ರಬಂಧ, ಸಂಶೋಧನೆ, ಆತ್ಮಚರಿತ್ರೆ) ಈಗಾಗಲೇ ನಿಗದಿಪಡಿಸಿರುವ ನವೋದಯ ಮುಂತಾದ ಚೌಕಟ್ಟುಗಳಲ್ಲಿ ಸೇರಿಸಲು ಬರುವುದಿಲ್ಲವೆಂದು ಅವರು ಹೇಳುತ್ತಾರೆ. ಹಾಗಾಗಿಯೇ ಸೀಮಿತ ನೆಲೆಯಲ್ಲಿ ಸಾಹಿತ್ಯ ಕೃತಿ, ಕವಿ, ಪ್ರಕಾರವನ್ನು ನೋಡಬಾರದೆಂಬ ಆಶಯ ಅವರಲ್ಲಿ ವ್ಯಕ್ತವಾಗುತ್ತದೆ.

### ೫.೩. ಜೋಗಿ : ಸಾಹಿತ್ಯಕ ಪರಿಕಲ್ಪನೆ

ಜೋಗಿಯವರು 'ಜಾನಕಿ ಕಾಲಂ' ವಿಮರ್ಶಾ ಕೃತಿಯಲ್ಲಿ ಸಾಹಿತ್ಯದ ಕುರಿತು ಹೊಂದಿರುವ ನಿಲುವುಗಳೇನು ಎಂಬುದನ್ನು ಇಲ್ಲಿ ವಿಶ್ಲೇಷಿಸಲು ಯತ್ನಿಸಲಾಗುವುದು. ತೇಜಸ್ವಿ ಅವರು ಸ್ವತಂತ್ರವಾಗಿ ಸಹಜವಾಗಿ ತಮ್ಮನ್ನು ಸಾಹಿತ್ಯದಲ್ಲಿ ತೊಡಗಿಸಿಕೊಂಡರು. ಅವರಲ್ಲಿ ಸಾಹಿತ್ಯದ ಮೂಲಕ ಯಾವತ್ತೂ ಕಥೆಯನ್ನು ಆರಂಭಿಸಿದ ಭಾಗದಿಂದ ಮುಂದೆ ಸಾಗಿ ಕೊನೆಗೆ ಅದೇ ಭಾಗಕ್ಕೆ ಬಂದು ಕೊನೆಯಾಗುವುದಿಲ್ಲ. ಜೋಗಿಯವರು ಹೇಳುವಂತೆ ಯಾವುದೋ ಒಂದು ಜಾಗದಿಂದ ಸಾಹಿತ್ಯ ಕೃತಿಯನ್ನು ಆರಂಭಿಸಿ ಮತ್ಯಾವುದೋ ತುದಿಗೆ ತಂದು ತೇಜಸ್ವಿ ನಿಲ್ಲಿಸಿಬಿಡುತ್ತಾರೆ. ಆದರೆ "ನಮ್ಮ ಬಹುತೇಕ ಲೇಖಕರು ನಿಮ್ಮನ್ನು ಸಫಾರಿಗೆ ಒಯ್ದು ಮರಳಿ ನೀವಿದ್ದ ಜಾಗಕ್ಕೆ ತಂದು ಬಿಡುತ್ತಾರೆ ನೋಡಿದ್ದು ಮರೆತಿರುತ್ತದೆ."[೨] ಎಂದು ಜೋಗಿ ಹೇಳುತ್ತಾರೆ. ಕಥೆಗಾರನಾದವನಲ್ಲಿ ಎಲ್ಲಿಂದಲ್ಲೋ ನಮ್ಮನ್ನು ಕರೆದುಕೊಂಡು ಹೋಗಿ ಇನ್ನೆಲ್ಲಿಗೋ ತಲುಪಿಸುವ ಗುಣವಿರಬೇಕು. ಅಂತಹ ಗುಣವಿರುವ ತೇಜಸ್ವಿ ಜೋಗಿ ಅವರ ನೆಚ್ಚಿನ ಕಥೆಗಾರ.

ಒಂದೇ ಪ್ರಕಾರಕ್ಕೆ ಗಂಟುಬಿದ್ದು ಸಾಹಿತ್ಯವನ್ನು ರಚನೆ ಮಾಡುವ ಲೇಖಕರನ್ನು ಜೋಗಿ ಇಷ್ಟಪಡುವುದಿಲ್ಲ. ನಮ್ಮಲ್ಲಿ ಅನೇಕ ಸಾಹಿತಿಗಳು ಕಾವ್ಯಕ್ಕೊ, ಕಥೆಗೊ, ನಾಟಕಕ್ಕೊ, ಕಾದಂಬರಿಗೊ ಯಾವುದೋ ಒಂದು ಪ್ರಕಾರಕ್ಕೆ ಮಾತ್ರ ಸೀಮಿತರಾಗಿ ಬಿಡುತ್ತಾರೆ. ಹೀಗೆ ಒಂದು ಪ್ರಕಾರಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಂಡು ಸಾಹಿತ್ಯ ರಚನೆಯಲ್ಲಿ ತೊಡಗಿರುವವರು ಅಷ್ಟು ಮುಖ್ಯರಾಗುವುದಿಲ್ಲ. ಎಲ್ಲಾ ಪ್ರಕಾರಗಳಲ್ಲೂ ತಮ್ಮನ್ನು ತೊಡಗಿಸಿಕೊಂಡು ಸಾಹಿತ್ಯದ ಮೂಲಕ ತಮ್ಮ ವಿಚಾರಗಳನ್ನು ಅಭಿವ್ಯಕ್ತಿಸುವವರು ಜೋಗಿಯವರ ಪ್ರಕಾರ ಮಹತ್ವದ ಲೇಖಕರು.

ಜೋಗಿಯವರು ಸ್ವತಃ ಕಥೆಗಾರರಾಗಿರುವುದರಿಂದ ಕಥೆಗಾರನಾದವರು ತೇಜಸ್ವಿಯಂತೆ ನಿಗೂಢತೆಯ ಹೊಸತನವನ್ನು ಕೃತಿಯಲ್ಲಿ ಬಳಸಬೇಕು. ಓದುಗ ಕಥೆಯನ್ನೂ, ಕಾದಂಬರಿಯನ್ನೂ, ಓದುವ ಮೂಲಕ ನಿಗೂಢತೆಯ ಜಗತ್ತನ್ನು ಸ್ಪರ್ಶಿಸುವ ಯತ್ನ ಮಾಡಬೇಕು ಎಂದು ಅಪೇಕ್ಷಿಸುತ್ತಾರೆ. ನಮ್ಮ ಬಹಳಷ್ಟು ಕಥೆಗಾರರು ಒಂದೇ ಕಂಬಕ್ಕೆ ಸುತ್ತುವುದನ್ನು ಬಿಡಬೇಕು

ಎಂಬುದು ಅವರ ಸೂಚನೆಯಾಗಿದೆ. ತೇಜಸ್ವಿಯ ಬರಹದ ಅನಿರೀಕ್ಷಿತ ಗುಣವನ್ನು ಅವರು ವಿವರಿಸುವುದು ಹೀಗೆ : "ಮೂಡಿಗೆರೆಯ ಜೇನು ಸೊಸೈಟಿಯಲ್ಲಿ ಶುರುವಾದ 'ಕರ್ವಾಲೋ' ಕತೆ ಅದ್ಯಾವುದೋ ಕಾಡಿನಂಚಿನ ಪರ್ವತದ ತುದಿಯೇರಿ ಬೆಕ್ಕಸ ಬೆರಗಾದ ಹಾರುವ ಓತಿಯ ಬಾಲದ ತುದಿಯಲ್ಲಿ ಕೊನೆಯಾಗುತ್ತದೆ. ಕೆಸರೂರಿನ ಕಾಲೇಜಿನಂಗಳದ ಕತೆ ಧಗಧಗಿಸುವ ಬೆಂಕಿ ಕಾಡಿನ ನಡುವಣ ಪ್ರೀತಿಯಲ್ಲಿ ಮೀಯುತ್ತದೆ. 'ಜುಗಾರಿಕ್ರಾಸ್'ನಲ್ಲಿ ಎಬಡಾತಬಡಾ ಕೂತ ಸ್ಥಂಭೀಭೂತ ಇಕ್ಬಾಲ್ ಸಾಬಿಯ ಕಣ್ಣಿನಾಳದ ಭಯ ಎರಡು ಮೇರಿಯ ಕೊನೆಯಿಲ್ಲದ ಸುರಂಗಗಳಲ್ಲಿ ತವಳಿ ಸುರೇಶ ಗೌರಿಯವರು ಅನಂತತೆಯ ಪ್ರತಿರೂಪದಂತಿದ್ದ ಖುದ್ದೂಸ್ ಎಕ್ಸ್‌ಪ್ರೆಸ್ ಎಂಬ ಲಟಾರಿಯ ಬಸ್ಸು ಏರುವಲ್ಲಿಗೆ ಕೊನೆಯಾಗುತ್ತದೆ."[೨]

ಹೀಗೆ ಜೋಗಿಯವರು ತೇಜಸ್ವಿಯವರು ಬರೆದ ಕೃತಿಗಳನ್ನು ನಮಗೆ ಪರಿಚಯಿಸುತ್ತಾ ಅವರ ಕಥೆ, ಕಾದಂಬರಿಗಳ ಆರಂಭ ಮತ್ತು ಮುಕ್ತಾಯದ ಘಟನೆಗಳು ಜರುಗುವುದು ಬೇರೆ ಬೇರೆ ಕಡೆಯೇ ಎಂದು ತೋರಿಸುತ್ತಾರೆ. ತೇಜಸ್ವಿಯವರು ಕೊನೆಯಲ್ಲಿ ಕಥೆಯನ್ನು ಮುಗಿಸಿದಾಗ ಯಾಕೆ ಹಾಗೆ ಕಥೆಯನ್ನು ನಿಲ್ಲಿಸಿದರು. ಹಿಂದಿನ ನಿಗೂಢತೆಯೇನು ಎಂದು ಯೋಚಿಸುವಂತೆ ಮಾಡುತ್ತದೆ ಎನ್ನುತ್ತಾರೆ. ಓದುಗರು ಕೂಡ ನಿಗೂಢತೆಯನ್ನು ದಕ್ಕಿಸಿಕೊಳ್ಳಬೇಕು ಎಂಬುದೇ ಅದರ ಅಭಿಲಾಷೆಯಾಗಿದೆ.

ಜೋಗಿಯವರು ಜೀವನ ಚರಿತ್ರೆ ಬರೆಯುವ ವಿಧಾನವು ಹೇಗಿರಬೇಕೆಂದು ತಿಳಿಸುತ್ತಾರೆ. ಲೇಖಕರು ಹೆಚ್ಚಾಗಿ ಜೀವನ ಚರಿತ್ರೆಯನ್ನು ಬರೆಯುವಾಗ ಊರು, ದಿನಾಂಕ, ವರ್ಷ ಎಂದು ಬರೆಯುತ್ತಾರೆ. ಇದು ಒಂದು ರೀತಿಯಲ್ಲಿ ಕೃತಕವೆಂದು ಭಾಸವಾಗುತ್ತದೆ. ಯಾರು ಜೀವನ ಚರಿತ್ರೆಯನ್ನು ಖುಷಿ, ರಾದ್ಧಾಂತ, ರಗಳೆ, ನೋವಿನ ಸಂಗತಿಗಳೊಂದಿಗೆ ಆತ್ಮೀಯತೆ ಎನಿಸುವ ಹಾಗೆ ಬರೆಯುತ್ತಾರೋ ಅದೇ ಒಳ್ಳೆಯ ಜೀವನ ಚರಿತ್ರೆ ಎಂದು ಅವರು ಕರೆಯುತ್ತಾರೆ. ತೇಜಸ್ವಿಯವರು ತಮ್ಮ 'ಅಣ್ಣನ ನೆನಪು' ಕೃತಿಯಲ್ಲಿ ಕುವೆಂಪುರವರೊಂದಿಗೆ ತೇಜಸ್ವಿ ಕಂಡ ಆತ್ಮೀಯ ಕ್ಷಣಗಳನ್ನು ದಾಖಲಿಸುತ್ತಾರೆ. ಜೀವನ ಚರಿತ್ರೆಗಳು ವ್ಯಕ್ತಿಯ ಜೀವನದ ಸಾಮಾನ್ಯ ವರದಿ ನೀಡುತ್ತವೆ. ಆದರೆ ಅವು ಗೆಳೆಯರೊಂದಿಗೆ ತಂದೆ-ಮಗನ ನಡುವಿನ ಕುಟುಂಬದೊಳಗೆ ನಡೆದ ಸ್ವಾರಸ್ಯ ಅಂಶಗಳು ದಾಖಲಿಸಬೇಕು. ಅಂತಹ ಲೇಖಕರುಗಳ 'ಜೀವನ ಚರಿತ್ರೆ'ಯ ಕೃತಿಗಳು ಹೆಚ್ಚಿನ ಮೌಲ್ಯವನ್ನು ಪಡೆಯುತ್ತವೆ ಎಂದು ಜೋಗಿ ಅವರು ಹೇಳುತ್ತಾರೆ.

ಜೋಗಿಯವರ ಅಭಿಪ್ರಾಯದಂತೆ "ಸಾಹಿತ್ಯ ಪಂಚೇಂದ್ರಿಯಗಳನ್ನು ಮೀರಿದ್ದು. ನಾವು ಸುಖಿಸುವುದು ಪಂಚೇಂದ್ರಿಯ ಮೂಲಕ ಅಂದುಕೊಂಡಿದ್ದರೆ ಅದು ಸುಳ್ಳು. ಅವನ್ನೆಲ್ಲ ಮೀರಿದ ಮನಸ್ಸೆಂಬ ಮನಸ್ಸಿಗೆ ಮುದ ನೀಡುವುದು ಸಾಹಿತ್ಯ."[೬] ಅವರು ಹೇಳುವಂತೆ ಸಾಹಿತ್ಯವನ್ನು

ಪಂಚೇಂದ್ರಿಯಗಳ ಮೂಲಕ ಅನುಭವಿಸಿ ಬರೆಯುವುದಿಲ್ಲ. ಅದನ್ನು ಮನಸ್ಸಿನ ಮೂಲಕ ಆಸ್ವಾದಿಸಿ ಬರೆಯುವ ಹೃದಯವಂತಿಕೆ ಇರಬೇಕು. ಅಂತಹ ಸಾಹಿತ್ಯ ಹೆಚ್ಚು ಶ್ರೇಷ್ಠವಾದುದು ಮತ್ತು ಆಪ್ತವಾದುದು. ಒಬ್ಬ ವೇಶ್ಯೆಯ ಬದುಕನ್ನು ನೋಟದಿಂದಲೇ ಅಳೆಯಲು ಸಾಧ್ಯವಿಲ್ಲ. ವೇಶ್ಯೆಯ ಬದುಕನ್ನು ನಿರ್ಮಲ ಮನಸ್ಸಿನ ಮೂಲಕ ಆ ಪಾತ್ರವಾಗಿಯೇ ನೋಡಿದಾಗ ಮಾತ್ರ ಅರಿವಿಗೆ ಬರುತ್ತದೆ ಎಂದು ಜೋಗಿಯವರು ಹೇಳುತ್ತಾರೆ.

ಇಂಗ್ಲೀಷ್ ಮತ್ತು ಕನ್ನಡ ಎರಡೂ ವಿಭಾಗದಲ್ಲಿ ಅದರ ಸಾಹಿತ್ಯದ ಗಂಧವನ್ನೇ ತಿಳಿಯದೆ ದುಡಿಯುವ, ಪತ್ರಕರ್ತರನ್ನು ಜೋಗಿಯವರು ಟಿವಿ ನಿರೂಪಕರಿಗೆ ಹೋಲಿಸುತ್ತಾರೆ. "ಉದಯ ಟಿವಿಯೆಂದರೆ ನನಗಿಷ್ಟ : ಕರೆಂಟಿಲ್ಲದಿದ್ದರೆ ನೋಡಲು ಕಷ್ಟ : ನೋಡದಿದ್ದರೆ ನಮಗಾಗುವುದು ನಷ್ಟ" ಎಂದು ವೀಕ್ಷಕರು ಬರೆದು ಕಳುಹಿಸುವ ಪತ್ರದ ಸಾಲುಗಳನ್ನು ನೀವು ತುಂಬಾ ಚೆನ್ನಾಗಿ ಕವಿತೆ ಬರೀತೀರಿ. ನಿಮಗೆ ಸಾಹಿತ್ಯ ಲೋಕದಲ್ಲಿ ಅಪಾರವಾದ ಜ್ಞಾನವಿದೆ. ನಿಮಗೆ ನಮ್ಮ ನಮಸ್ಕಾರ ಎಂದು ಟಿವಿ ನಿರೂಪಕಿ ಹೇಳುವ ಹಾಗೆ ಪತ್ರಿಕೆಗಳೂ ವರ್ತಿಸೋದಕ್ಕೆ ಆರಂಭಿಸಿವೆ.[೬] ಎನ್ನುವ ಅವರು, ಒಂದು ವಿಷಯದ ಬಗ್ಗೆ ಪೂರ್ಣ ಜ್ಞಾನವಿರದೆ ಆ ಬಗ್ಗೆ ಲೇಖನ ಬರೆಯುವ ಪತ್ರಕರ್ತರನ್ನು ಮೆಚ್ಚುವುದಿಲ್ಲ. ಒಂದು ವಿಷಯವನ್ನು ಬರೆಯುವ ಮುಂಚೆ ಪೂರ್ಣಜ್ಞಾನದ ಅರಿವಿದ್ದು ಬರೆಯುವ ಪತ್ರಕರ್ತರು ಅವರಿಗೆ ಮೆಚ್ಚುಗೆಯಾಗುತ್ತಾರೆ.

ಜೋಗಿಯವರಿಗೆ 'ಸಾಹಿತ್ಯದ ಶ್ರೇಷ್ಠತೆಯ' ಹಾಗೂ ಮನುಷ್ಯನ ಪರಿಪೂರ್ಣತೆಯ ಪ್ರಶ್ನೆ ಬಂದಾಗ ನೆನಪಾಗುವುದು, ಪ್ರಗತಿಶೀಲ ಕಾಲಘಟ್ಟದ ಭಾರತೀಪ್ರಿಯರ 'ಮೋಚಿ' ಕಥೆ ಮತ್ತು ನವ್ಯ ಕಾಲಘಟ್ಟದ ಲಂಕೇಶರ 'ಗಿಳಿಯು ಪಂಜರದೊಳಿಲ್ಲ'. "ನಮ್ಮ ಶ್ರೇಣೀಕೃತ ಸಮಾಜ ಹೇಗಿದೆಯೆಂದರೆ ಮೇಲುಸ್ತರದಲ್ಲಿರುವ ಒಬ್ಬ ವ್ಯಕ್ತಿಗೆ ಅತ್ಯಂತ ಆಪ್ತ ಎನಿಸುವ ಸಾಹಿತ್ಯ, ಕೆಳಸ್ತರದಲ್ಲಿರುವ ಒಬ್ಬ ವ್ಯಕ್ತಿಗೆ ತಟ್ಟದೆಯೇ ಇರಬಹುದು."[೮] ಎಂದು ಹೇಳುವ ಅವರು, ನವ್ಯ ಕಾಲದ ಲೇಖಕ ಅಥವಾ ಪ್ರಸ್ತುತ ಸಂದರ್ಭದಲ್ಲಿನ ಲೇಖಕನಾದವನು ರೈತನ ಸಮಸ್ಯೆಯನ್ನು ಕಥೆಯ ಮೂಲಕ ವಾಸ್ತವವಾಗಿ ತರಬೇಕೆ ಹೊರತು ಭ್ರಮಾತ್ಮಕ ಜಗತ್ತನ್ನು ಸೃಷ್ಟಿಸಬಾರದೆಂದು ಹೇಳುತ್ತಾರೆ. ನಿಜವಾದ ಲೇಖಕರು ತಮ್ಮ ಆ ಕಾಲದ ತುರ್ತುಗಳಿಗೆ ಸ್ಪಂದಿಸಬೇಕು. ಸಾಹಿತ್ಯದ ಮೂಲಕ ವಾಸ್ತವ ಸಮಸ್ಯೆಗಳನ್ನು ಕತೆಯ ಮೂಲಕ ವ್ಯಕ್ತಪಡಿಸಬೇಕು. ಸಾಹಿತ್ಯದ ಮೂಲಕ ವಾಸ್ತವ ಬದುಕಿನ ಚಿತ್ರಣವನ್ನು ಕಟ್ಟಿಕೊಡುವ ಸಾಹಿತಿಗಳು ಶ್ರೇಷ್ಠರೆಂದು ಜೋಗಿಯವರು ಹೇಳುತ್ತಾರೆ. ಇದು ಸಾಹಿತ್ಯದ ಕುರಿತು ಅವರು ಹೊಂದಿರುವ ನಿಲುವು ಆಗಿದೆ.

ಜೋಗಿಯವರು ಕವಿತೆಯ ಮೂಲಕ ಚರಿತ್ರೆಯನ್ನು ಕಟ್ಟಿಕೊಡುವ ಕವಿಗಳ ಕುರಿತು ಹೀಗೆ ಹೇಳುತ್ತಾರೆ. "ಶರಾವತಿ ನದಿ ಜೋಗದಲ್ಲಿ ಧುಮುಕಿ ಕರೆಂಟು ಉತ್ಪಾದಿಸುವ ಯಂತ್ರಗಳ

ಮೂಲಕ ಕರೆಂಟು ತಂತಿಗಳಲ್ಲಿ ಸಾಗಿ ಮೊಳಕಾಲ್ಮೂರಿನ ಬೀದಿಗಳನ್ನು ಬೆಳಗಿತು. ಜೋಗದ ಸಿರಿ ಬೆಳಕಿನಲ್ಲಿ.........." ನಿಸಾರ್ ಕವಿತೆಯ ಚಿಕ್ಕಸಾಲುಗಳ ಆಗಾಧತೆಯನ್ನು ಜೋಗಿ ಹೀಗೆ ತಿಳಿಸುತ್ತಾರೆ. ಒಂದು ಕವಿತೆಯ ಮೂಲಕ ಒಂದು ಕಥೆ ಅಥವಾ ಇತಿಹಾಸವನ್ನು ಹುಡುಕುತ್ತಾ ಕಾವ್ಯಕ್ಕಿರುವ ವಿಸ್ತೃತ ನೆಲೆಯನ್ನು ಓದುಗ ವಲಯಕ್ಕೆ ಅವರು ಮುಟ್ಟಿಸುತ್ತಾರೆ. ಕಾವ್ಯ ಎಷ್ಟೇ ಸರಳವಾಗಿ ಕಂಡರೂ, ಅಷ್ಟೇ ಒಳನೋಟಗಳನ್ನು ಪಡೆದಿರುತ್ತದೆ. ಇಂತಹ ಒಂದು ಚರಿತ್ರೆಯನ್ನು ಕಾವ್ಯದ ಮೂಲಕ ಕಟ್ಟಿಕೊಡುವ ನಿಸಾರ್ ಜೋಗಿಯವರಿಗೆ ಮುಖ್ಯರಾಗಿ ಕಾಣುತ್ತಾರೆ.

**೫.೪. ತಾರಿಣಿ ಶುಭದಾಯಿನಿ : ಸಾಹಿತ್ಯ ಪರಿಕಲ್ಪನೆ**

ಹೊಸ ತಲೆಮಾರಿನ ವಿಮರ್ಶಕಿಯರಲ್ಲಿ ಒಬ್ಬರಾದ ತಾರಿಣಿಯವರು, ತಮ್ಮ ವಿಮರ್ಶಾ ಕೃತಿಯ ಪ್ರಮುಖ ಲೇಖನಗಳ ಮೂಲಕ ಸಾಹಿತ್ಯದ ಕುರಿತು ಹೊಂದಿರುವ ಧೋರಣೆಯನ್ನು ಈ ಭಾಗದಲ್ಲಿ ಚರ್ಚಿಸಲು ಯತ್ನಿಸಿದೆ. ಕನ್ನಡ ಕಾವ್ಯ ಸಂದರ್ಭದಲ್ಲಿ ಮಹಿಳಾ ಕಾವ್ಯ ಇತ್ತೀಚಿನ ಬೆಳವಣಿಗೆಯಾಗಿದೆ. ದಲಿತ ಬಂಡಾಯ ಚಳುವಳಿಯ ಭಾಗವಾಗಿ ಬಂದ ಸ್ತ್ರೀವಾದಿ ತಾತ್ವಿಕ ನೆಲೆಗಳು, ಎಷ್ಟೇ ಎತ್ತರ ಬೆಳೆದರೂ ನಮ್ಮ ವಿಮರ್ಶಾ ಮಾನದಂಡಗಳು ಅವಜ್ಞೆಯನ್ನು ತೋರಿಸುತ್ತಲೇ ಬಂದಿವೆ ಎಂಬುದು ತಾರಿಣಿಯವರ ಆರೋಪವಾಗಿದೆ. ಹಾಗಾಗಿ ಮಹಿಳಾ ಅಭಿವ್ಯಕ್ತಿ ರಚನೆ, ಸಂವೇದನೆಗಳನ್ನು 'ದಂಡೆಗೆ ಬಂದ ಚಿಪ್ಪಿನಲ್ಲಿ ಎಪ್ಪತ್ತು ಸಾವಿರದ ಮುತ್ತು' ಲೇಖನದಲ್ಲಿ ಗುರುತಿಸುತ್ತಾರೆ. ಮೆಚ್ಚುಗೆಯ ಸ್ತರಗಳನ್ನು ಬಿಟ್ಟು ಹೊಸ ನೆಲೆಯಲ್ಲಿ ಮಹಿಳಾ ಬರವಣಿಗೆಯನ್ನು ಗಮನಿಸದೆ ಇರುವುದರ ಬಗ್ಗೆ ಬೇಸರವನ್ನು ಅವರು ವ್ಯಕ್ತಪಡಿಸುತ್ತಾರೆ. ಸ್ತ್ರೀವಾದದ ನೆಲೆಯಲ್ಲಿ ಮಹಿಳಾ ಸಾಹಿತ್ಯವನ್ನು ಚರ್ಚಿಸಿ ನಿರ್ಲಕ್ಷಿಸುವ ಧೋರಣೆಗಳನ್ನು ಚರ್ಚಿಸುವ ಸಂದರ್ಭವಿದೆಯೆಂದು ಅವರು ಹೇಳುತ್ತಾರೆ. ನಮ್ಮ ಕಾಲದ ಕವಯತ್ರಿಯರಾದ ಪ್ರತಿಭಾ ನಂದಕುಮಾರ್ ಮತ್ತು ಸವಿತಾ ನಾಗಭೂಷಣ ಅವರ ಕಾವ್ಯ ಸೃಷ್ಟಿಸುವ ರಚನೆ, ಅಭಿವ್ಯಕ್ತಿ ಸಂವೇದನೆಗಳನ್ನು ಕುರಿತು ಚರ್ಚಿಸುವ ಪ್ರಯತ್ನವನ್ನು ಅವರು ಮಾಡಿದ್ದಾರೆ. ಸ್ತ್ರೀವಾದದ ನೆಲೆಯನ್ನು ಕವಯತ್ರಿಯರ ಕಾವ್ಯದಲ್ಲಿ ಕಾಣುವ ಮನೋಭಾವ ಅವರ ವಿಮರ್ಶೆಯಲ್ಲಿ ಹೆಚ್ಚು ವ್ಯಕ್ತವಾಗಿದೆ.

ತಾರಿಣಿಯವರು ಮಹಿಳಾ ಕಾವ್ಯಕ್ಕೆ ಭಾಷೆಯಿಂದ ಉಂಟಾದ ತೊಡಕನ್ನು ಗುರುತಿಸುತ್ತಾರೆ. ಕವಯತ್ರಿಯರು ರಚಿಸಿದ ಮಹಿಳಾ ಕಾವ್ಯವನ್ನು ಹೀಗಾಗಲೇ ಪುರುಷ ಸಮಾಜವು ಸಿದ್ಧಪಡಿಸಿದ ಭಾಷೆಯಲ್ಲಿ ಅಭಿವ್ಯಕ್ತಿಸುವ ಕ್ರಮವನ್ನು ಅವರು ವಿರೋಧಿಸುತ್ತಾರೆ. ಲೇಖಕಿಯರು ತಮ್ಮದೇ ಆದ ಅಭಿವ್ಯಕ್ತಿಯ ಸಂವಾದದ ಭಾಷೆಯನ್ನು ರಚಿಸಿಕೊಳ್ಳಬೇಕಾಗಿರುವ ತುರ್ತಿನ ಅಗತ್ಯವನ್ನು ಅವರು 'ದಂಡೆಗೆ ಬಂದ ಚಿಪ್ಪಿನಲ್ಲಿ ಎಪ್ಪತ್ತು ಸಾವಿರದ ಮುತ್ತು' ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ.

"ನಾಚಿಕೆಯಾಗಬೇಕು ಜೀವನಕ್ಕೆ
ಅರ್ಥ ಕ್ರೆಡಿಟ್ ತೆಗೆದುಕೊಳ್ಳುವುದಕ್ಕೆ
ಹೆಣ್ತನದ ಸೂಚನೆಯೆಂದು ಒಂದು
ಸ್ತನ ಧರಿಸಿಬಿಟ್ಟರೆ ಆಯಿತೇ ಲಿಂಗಕ್ಕೆ
ಅರೆ ಬಸಿರು ತಡೆಯಬಹುದೇ ಪೂರ್ಣ ಗರ್ಭದ ಹೊರೆ?"[೧೦]

ತಾರಿಣಿಯವರು ಪ್ರತಿಭಾರವರ ಮೇಲ್ಕಾಣಿಸಿದ ಪದ್ಯವನ್ನು ತೆಗೆದುಕೊಂಡು ಈಗಾಗಲೇ ಸಿದ್ಧಪಡಿಸಿರುವ ಮಾದರಿಯನ್ನು (ಮಿಥ್) ಒಡೆಯುವ ಹಾಗೂ ದೇಹಶಿಲ್ಪದ ಭೇದನೆ, ವ್ಯಂಗ್ಯಗಳು, ಪುರಾಣಕ್ಕೆ ವ್ಯಾಪಿಸಿರುವುದರ ಕುರಿತು ಓದುಗರ ಗಮನವನ್ನು ಸೆಳೆಯುತ್ತಾರೆ. ಹೆಣ್ತನದ ಕುರುಹುಗಳನ್ನು ಹೊಂದಿದಾಕ್ಷಣ ಪೂರ್ಣಾಂಗನಾಗಲು ಸಾಧ್ಯವಿಲ್ಲವೆಂಬ ವ್ಯಂಗ್ಯ ಕವಿತೆಯಲ್ಲಿದೆ. ಹೆಣ್ತನದ ಬಗೆಗಿರುವ ಈಗಾಗಲೇ ಒಪ್ಪಿತ ದೃಷ್ಟಿಕೋನವನ್ನು ಒಡೆಯುವ ಮೂಲಕ ಪ್ರತಿಭಾರ ಕಾವ್ಯವನ್ನು ತಾರಿಣಿ ಎರಡು ನೆಲೆಯಲ್ಲಿ ವಿಶ್ಲೇಷಿಸುತ್ತಾರೆ. ಪುರುಷ ವ್ಯವಸ್ಥೆಯು ಈಗಾಗಲೇ ಪುರಾಣದ ಮೂಲಕ ಸ್ತ್ರೀಯರ ಮೇಲೆ ಹೇರಿರುವ ಬಂಧವನ್ನು ಮುಕ್ತಗೊಳಿಸಿಕೊಳ್ಳಬೇಕು. ಸ್ವತಂತ್ರವಾಗಿ ತನ್ನ ಅಸ್ತಿತ್ವವನ್ನು ತಾನೇ ಉಳಿಸಿಕೊಳ್ಳಬೇಕು. ಎರಡು ರೀತಿಯ ಆಲೋಚನೆ ಅವರಲ್ಲಿ ಇರುವ ಇಂತಹ ಕವಯತ್ರಿಯರು ಅವರಿಗೆ ಆತ್ಮೀಯರಾಗುತ್ತಾರೆ.

ತಾರಿಣಿಯವರು ಹೇಳುವಂತೆ ಒಂದು ಕಾಲದಲ್ಲಿ ಕಾವ್ಯವೇ ಮಹಿಳಾ ಅಭಿವ್ಯಕ್ತಿಯ ಬಹುಮುಖ್ಯ ಮಾದ್ಯಮವಾಗಿತ್ತು. ಸಾಂಕೇತಿಕ ಭಾಷೆಯಲ್ಲಿಯೇ ಸಂವೇದನೆಗಳು ಪ್ರಕಟಗೊಳ್ಳುತ್ತಿದ್ದವು. ಆದರೆ ಈಗ ಕಥಾನಕಗಳು, ಮಹಿಳಾ ಅಭಿವ್ಯಕ್ತಿಯ ಮುಕ್ತ ಮಾಧ್ಯಮವಾಗಿ ಹೊರಹೊಮ್ಮಿರುವುದು ಆಶಾದಾಯಕ ಬೆಳವಣಿಗೆ ಎಂದು ಅವರು ತಿಳಿಸುವರು. ನೇಮಿಚಂದ್ರ, ಸರಸ್ವತಿ, ಪಾರ್ವತಮ್ಮ, ಮಹಾಲಿಂಗ ಶೆಟ್ಟಿ, ಎಚ್.ನಾಗವೇಣಿ, ಸವಿತಾ ನಾಗಭೂಷಣ, ಗಿರಿಜಮ್ಮ, ವಿಜಯಲಕ್ಷ್ಮಿ ಬಾಳೇಕುಂದ್ರಿ, ಲೀಲಾವತಿ ದೇವದಾಸ್ ಮುಂತಾದ ಬರಹಗಾರ್ತಿಯರನ್ನು ಹೆಸರಿಸುತ್ತಾ, ಇವರೆಲ್ಲಾ ಕಥಾನಕಗಳ ಮೂಲಕವೇ ಚರಿತ್ರೆಯನ್ನು ಕಟ್ಟಿಕೊಡುವ ಸುಳಿವು ನೀಡಿರುವುದು ಸಾಹಿತ್ಯಕ್ಕಿರುವ ವಿಸ್ತೃತತೆ ಎಂದು ಅವರು ಹೇಳುತ್ತಾರೆ. ಇಂತಹ ಬರಹಗಾರ್ತಿಯರು ಅವರಿಗೆ ಆಪ್ತರಾಗುವುರಲ್ಲದೆ ಇನ್ನೂ ಹೆಚ್ಚು ಹೆಚ್ಚು ಲೇಖಕಿಯರು ಬರಹದಲ್ಲಿ ತೊಡಗಿಸಿಕೊಳ್ಳಬೇಕೆಂಬ ಆಶಯವನ್ನು ಅವರು ವ್ಯಕ್ತಪಡಿಸುತ್ತಾರೆ.

ಕವಿಯ ಕವಿತೆಯ ಮೂಲಕ ದೇಸೀಯ ಪ್ರಜ್ಞೆಯನ್ನು ಕಟ್ಟಿಕೊಡುವ ತಾರಿಣಿಯವರು ಭಿನ್ನರಾಗಿ ಕಾಣುತ್ತಾರೆ. ಜಾಗತೀಕರಣಕ್ಕೆ ವಿರುದ್ಧವಾಗಿ ಬಂದದ್ದು ನಮ್ಮ ನೆಲದ ಸಂಸ್ಕೃತಿ ಎಂಬುದು ಅವರ ಅಭಿಪ್ರಾಯ. ಎಸ್.ಜಿ. ಸಿದ್ಧರಾಮಯ್ಯನವರ 'ಗಿಡುಗ ಮತ್ತು ಎರೆಹುಳ'

ಕವಿತೆಯ ಮೂಲಕ ಆಧುನಿಕತೆ ಮತ್ತು ದೇಶಿಯತೆಯ ನಡುವಿನ ಸಂಘರ್ಷವನ್ನು ಅವರು ವಿಶ್ಲೇಷಿಸುವರು. ಈ ಎರಡು ಪ್ರತಿಮೆಗಳು ಎರಡು ನೆಲೆಗಳಲ್ಲಿ ಕಾವ್ಯವನ್ನು ಬೆಳೆಸುತ್ತವೆ. ಗಿಡುಗ ಪಾಶ್ಚಿಮಾತ್ಯದ ಸಂಕೇತವಾಗಿ ಕಂಡರೆ, ಎರೆಹುಳು ದೇಶೀಯ ನೆಲೆಯ ಸಂಕೇತವಾಗಿ ಕಂಡಿದೆ. ತಾರಿಣಿಯವರು ಇದೇ ಪ್ರಶ್ನೆಯನ್ನು ಎತ್ತುತ್ತಾ ನಿಜವಾದ ನೆಲದ ವಾರಸುದಾರ ಯಾರು ಎಂಬ ಪ್ರಶ್ನೆ ಹಾಕುತ್ತಾರೆ.

ತಾರಿಣಿಯವರಂತೆ ಅನೇಕ ವಿಮರ್ಶಕರು ಸೂಕ್ಷ್ಮವಾದ ವಿಚಾರಗಳಿಗೆ ಸ್ಪಂದಿಸುತ್ತಿರುವುದು ಕನ್ನಡದಲ್ಲಿ ಒಳ್ಳೆಯ ಬೆಳವಣಿಗೆಯಾಗಿದೆ. 'ಶತಮಾನದ ಸಾಹಿತ್ಯ ವಿಮರ್ಶೆ' ಸಂಕಲನ ಮಾಡುವಾಗ "ಕನ್ನಡದಲ್ಲಿ ಹೊಸ ತಲೆಮಾರಿನಲ್ಲಿ ವಿಮರ್ಶಕರೇ ಕಾಣುತ್ತಿಲ್ಲವೆಂದು ಸಂಪಾದಕರಾದ ಎಚ್.ಎಸ್. ರಾಘವೇಂದ್ರರಾವ್ ಆತಂಕ ವ್ಯಕ್ತಪಡಿಸಿದ್ದಾರೆ" ಎಂದು ತಮ್ಮ ಲೇಖನದಲ್ಲಿ ರಹಮತ್ ತರೀಕೆರೆಯವರು ಪ್ರಸ್ತಾಪಿಸುತ್ತಾರೆ. ಆದರೆ ಇತ್ತೀಚಿನ ವಿಮರ್ಶಕರಾದ ತಾರಿಣಿ ಶುಭದಾಯಿನಿ, ಬಿ.ಎಂ.ಪುಟ್ಟಯ್ಯ, ಜಿ.ಬಿ.ಹರೀಶ್, ಕವಿತಾ ರೈ, ವಿನಯಾ, ಸಿರಾಜ್ ಅಹಮದ್, ಮುಂತಾದವರು ಆತಂಕಕ್ಕೆ ಉತ್ತರ ಕೊಡುವಂತೆ ಬರೆಯುತ್ತಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ಆದರೂ ಕನ್ನಡ ವಿಮರ್ಶೆ ಅಳವಿನಂಚಿನಲ್ಲಿರುವ ಪ್ರಕಾರದಂತೆಯೇ ಕಾಣುತ್ತದೆ. ಇಂದು ಕಥೆ, ಕಾದಂಬರಿ, ಕಾವ್ಯ ಪ್ರಕಾರಗಳಲ್ಲಿ ಹೆಚ್ಚು ಬರಹಗಾರರು ಕ್ರಿಯಾಶೀಲರಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದಾರೆ. ಆದರೆ ವಿಮರ್ಶೆಯ ಪ್ರಕಾರದಲ್ಲಿ ಬೆರಳಣಿಕೆಯ ವಿಮರ್ಶಕರಿದ್ದಾರೆ. ಇತ್ತೀಚಿಗೆ ಮಾಸ್ತಿ ಪ್ರಶಸ್ತಿ ಪಡೆದ ಜಿ.ಎಸ್. ಆಮೂರರವರು ಸಹ ಯುವ ವಿಮರ್ಶಕರು ವಿಮರ್ಶೆಯಲ್ಲಿ ಹೆಚ್ಚಾಗಿ ತೊಡಗಿಕೊಳ್ಳದೇ ಇರುವುದರ ಬಗ್ಗೆ ಆತಂಕ ವ್ಯಕ್ತಪಡಿಸುತ್ತಾರೆ.

**೫.೫. ಜಿ.ಬಿ.ಹರೀಶ್ : ಸಾಹಿತ್ಯದ ಪರಿಕಲ್ಪನೆ**

ಜಿ.ಬಿ.ಹರೀಶ್‌ರವರ ವಿಮರ್ಶಾ ಸಂಕಲನ 'ಬೆಳಕಿನಾಟ'ದಲ್ಲಿನ ವಿಮರ್ಶಾ ಲೇಖನಗಳ ಮೂಲಕ ಅವರು 'ಸಾಹಿತ್ಯ ಪರಿಕಲ್ಪನೆ'ಯ ಬಗ್ಗೆ ಹೊಂದಿರುವ ದೃಷ್ಟಿಕೋನವನ್ನು ಅರಿಯುವುದಕ್ಕೆ ಇಲ್ಲಿ ಯತ್ನಿಸಬಹುದು. ಹರೀಶ್ ಅವರು ಮಲೆಯೂರಿನ ದೇವಚಂದ್ರ ಕವಿಯ 'ರಾಜಾವಳಿ ಕಥಾಸಾರ' ಕನ್ನಡದ ಪ್ರಮುಖ ಸಾಂಸ್ಕೃತಿಕ ಪಠ್ಯವನ್ನಾಗಿಯೂ, ವಸಾಹತುಶಾಹಿ ಆಡಳಿತ, ಲೋಕದೃಷ್ಟಿ ಕುರಿತು ಸಹಾನುಭೂತಿ ಹೊಂದಿದ ಕೃತಿಯನ್ನಾಗಿಯೂ ಗುರುತಿಸುತ್ತಾರೆ. ಒಂದು ಕೃತಿಯ ಒಳಗೆ ನಿರ್ಲಕ್ಷಿತ ಸಮುದಾಯಗಳ ಹುಡುಕಾಟ ನಡೆಸಿರುವ ಅವರ ಕ್ರಮ ವಿಶಿಷ್ಟವಾದುದು. ಯಾವುದೇ ಒಂದು ನೆಲೆಯ ಅಧ್ಯಯನಕ್ಕೆ ಸೀಮಿತವಾಗದೆ ಎಲ್ಲಾ ನೆಲೆಯಲ್ಲೂ ಅಧ್ಯಯನ ನಡೆಸಿ ನ್ಯಾಯ ಒದಗಿಸಬೇಕೆಂಬ ಕಾಳಜಿ ಅವರಲ್ಲಿ ವ್ಯಕ್ತವಾಗಿದೆ. ಈಗಾಗಲೇ ನಿರ್ಲಕ್ಷಕ್ಕೆ

ಒಳಗಾದ ಕೃತಿ ಮತ್ತು ಕೃತಿಯ ವಸ್ತುವನ್ನು ಪುರ್ನವಿಮರ್ಶೆಗೆ ಒಳಪಡಿಸಿ ವಿಸ್ತೃತ ನೆಲೆಯಲ್ಲಿ ಅಧ್ಯಯನ ಮಾಡಬೇಕೆಂಬ ಆಶಯ ಅವರದಾಗಿದೆ.

"ಕನ್ನಡ ಸಂಸ್ಕೃತಿಯ ಬಹುಮುಖ್ಯ ಜನಪದ ಮಹಾಕಾವ್ಯಗಳ ನಾಯಕರಾದ ಮಂಟೇಸ್ವಾಮಿ, ಮಲೆಮಾದೇಶ್ವರ, ರಾಚಪ್ಪ, ಸಿದ್ದಪ್ಪಾಜಿ ಇವರ ಬಗ್ಗೆ ಬರೆಯುವುದಕ್ಕೆ ವಸಾಹತು ಪರಿಪ್ರೇಕ್ಷ್ಯವೇ ಕಾರಣ"[೧೧] ಎಂದು ಹೇಳುವ, ಹರೀಶ್ ಬುಡಕಟ್ಟಿನ ಮಹಾಕಾವ್ಯಗಳಾದ ಇವು ನಮ್ಮ ಸಂಸ್ಕೃತಿಯ ಹೆಗ್ಗುರುತುಗಳಾಗಿವೆ. ಭಾಗವಹಿಸಿದವರು ಆಧುನಿಕ ಸವಾಲುಗಳ ಪ್ರಭಾವದಿಂದ ಲಿಖಿತ ರೂಪದಲ್ಲಿ ಇಂದು ದೊರೆತಿರುವ ಕಾವ್ಯಗಳ ಮೂಲಕ ಬುಡಕಟ್ಟಿನ ನಾಯಕರನ್ನು ತಿಳಿದುಕೊಳ್ಳಲು ಸಹಾಯವಾಗಿದೆಯೆಂದು ಅವರು ಅಭಿಪ್ರಾಯಪಡುತ್ತಾರೆ. ಬ್ರಿಟಿಷರ ಆಗಮನದಿಂದ ಕೇವಲ ಸಮಾಜದಲ್ಲಿ ಬದಲಾವಣೆಯಾಗಲಿಲ್ಲ. ಸಾಹಿತ್ಯ ರಚನೆಯಲ್ಲಿ ಕೂಡ ಬದಲಾವಣೆಯ ಗಾಳಿ ಬೀಸಿತು. ಹೀಗೆ ವಸಾಹತುಶಾಹಿಯಿಂದ ಒಂದು ವಿಧದಲ್ಲಿ ನಮ್ಮ ಸಂಸ್ಕೃತಿಯು ಲಿಖಿತ ರೂಪದಲ್ಲಿ ಅನಾವರಣವಾಯಿತು ಎಂದು ಹರೀಶ್‌ರವರು ಮೆಚ್ಚುಗೆ ವ್ಯಕ್ತಪಡಿಸುತ್ತಾರೆ.

ಹರೀಶ್ ಅವರು 'ರಾಜಾವಳಿ ಕಥಾಸಾರ'ದಲ್ಲಿ ಕ್ರೈಸ್ತ ಧರ್ಮದ ಕುರಿತು ಪ್ರಸ್ತಾಪವಾಗಿ ರುವುದನ್ನು ಹೇಳುತ್ತಾರೆ. ಜೈನಧರ್ಮದ ಕವಿಯೊಬ್ಬ ವಸಾಹತುಶಾಹಿ ಪ್ರಭಾವಕ್ಕೆ ಒಳಪಟ್ಟು ಕ್ರೈಸ್ತ ಧರ್ಮವನ್ನು ಸಂಕ್ಷಿಪ್ತವಾಗಿ ಹೇಳಲು ಪ್ರಯತ್ನಿಸಿರುವುದನ್ನು ಕೃತಿಯಲ್ಲಿ ಅವರು ಗುರುತಿಸುತ್ತಾರೆ. ಕನ್ನಡದ ಬಹುತೇಕ ಹಿಂದಿನ ಜೈನ ಕವಿಗಳು ಬೇರೆ ಧರ್ಮದ ಅಥವಾ ಕೆಳಸ್ತರದ ಸಮುದಾಯಗಳ ಬಗ್ಗೆ ಕೃತಿಯೊಳಗೆ ಚರ್ಚೆ ಮಾಡಲಿಲ್ಲ. ಈ ಹಿನ್ನೆಲೆಯಲ್ಲಿ ಎಲ್ಲಾ ಮತಧರ್ಮದ, ಸಾಮಾನ್ಯ ವರ್ಗದವರ ಬಗ್ಗೆ ತನ್ನ ಕೃತಿಯೊಳಗೆ ದಾಖಲಿಸಿರುವ ದೇವಚಂದ್ರ ಅವರಿಗೆ ಹೆಚ್ಚು ಮಹತ್ವದ ಲೇಖಕನೆನಿಸುತ್ತಾನೆ. ಒಂದೇ ಚೌಕಟ್ಟಿಗೆ ಒಳಪಟ್ಟು ಕೃತಿಗಳನ್ನು ರಚನೆ ಮಾಡುವ ಕವಿಗಳನ್ನು ಹಾಗೂ ನಿರ್ಲಕ್ಷಿತ ಸಮುದಾಯಗಳ ಕಡೆ ಬೆಳಕು ಚೆಲ್ಲದ ಕೃತಿಕಾರರನ್ನು ಅವರು ಆತ್ಮೀಯವಾಗಿ ಮುಖ್ಯವೆಂದು ಪರಿಗಣಿಸುವುದಿಲ್ಲ. ಶಿವರುದ್ರಪ್ಪನವರು ಹೇಳಿದಂತೆ ಸಾಹಿತ್ಯ ಜೀವನದ ಗತಿಬಿಂಬದ ಆಶಯವು ಹಾಗೂ ಕುವೆಂಪು ಅವರ ವಿಶ್ವಮಾನವತೆಯ ತತ್ವದ ಆಶಯವು ಅವರ ಸಾಹಿತ್ಯದ ಪರಿಕಲ್ಪನೆಯಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ.

ಹರೀಶ್ ಅವರು 'ರಾಜಾವಳಿ ಕಥಾಸಾರ' ಪಠ್ಯದಲ್ಲಿ ಕಂಡದ್ದನ್ನೆಲ್ಲಾ ದಾಖಲು ಮಾಡುವ ಪ್ರವೃತ್ತಿ ಸಂಪೂರ್ಣವಾಗಿ ಭಾರತೀಯ ವಿದ್ವತ್ತಿನ ಲಕ್ಷಣವಲ್ಲ ಎಂಬುದು ಗುರುತಿಸುತ್ತಾರೆ. ಒಂದು ಕಡೆ ನಾಡಿನ ಜನ ಜೀವನ ವಸಾಹತುಶಾಹಿಗೆ ಹೊಂದಿಕೊಳ್ಳಲು ಒದ್ದಾಟ ನಡೆಸಿದೆ. ಇನ್ನೊಂದು ಕಡೆ ವಸಾಹತುಶಾಹಿ ತಾನು ಆಳುತ್ತಿರುವ ಸಂಸ್ಕೃತಿಯನ್ನು ತನ್ನ ಅಧ್ಯಯನ

ವಸ್ತುವನ್ನಾಗಿ ಮಾಡಿಕೊಂಡಿದೆ. ಈ ವೈರುಧ್ಯವನ್ನು ಹರೀಶ್ ಅವರು ತಮ್ಮ ಲೇಖನದಲ್ಲಿ ಚರ್ಚಿಸುತ್ತಾರೆ. ಹೀಗಾಗಿ ನಿರ್ಲಕ್ಷಿಸಲ್ಪಟ್ಟಿರುವ ಇಂತಹ ಸಾಹಿತ್ಯ ಕೃತಿಗಳನ್ನು ಓದುಗರು ಇನ್ನೂ ಮುಂದಾದರೂ ಓದಬೇಕೆಂಬ ಆಶಯವು ಅವರಲ್ಲಿ ವ್ಯಕ್ತವಾಗುತ್ತದೆ.

ದೇಶೀವಾದದ ಪ್ರಮುಖ ಪ್ರತಿಪಾದಕರಾಗಿ ಬೆಳೆದ ಕಾದಂಬರಿಕಾರ ಶಂಕರ ಮೊಕಾಶಿ ಪುಣೇಕರ ಕವಿತೆಗಳ ಮೂಲಕ ಬೆಳಕಿಗೆ ಬಂದವರೆಂದು ಹರೀಶ್ ಹೇಳುತ್ತಾರೆ. ಕನ್ನಡದಲ್ಲಿ ಮರಾಠಿ ಮೂಲದ ಮೂವರು ಶ್ರೇಷ್ಠ ಸಾಹಿತಿ–ಚಿಂತಕರೆಂದರೆ ದ.ರಾ.ಬೇಂದ್ರೆ, ಶಂಬಾ ಜೋಶಿ ಮತ್ತು ಪುಣೇಕರು ಎಂದು ಅವರು ಗುರುತಿಸುತ್ತಾರೆ. ಇಂಗ್ಲೀಷ್‌ನಲ್ಲಿ ೨೦ ಕೃತಿಗಳನ್ನು ಮತ್ತು ಕನ್ನಡದಲ್ಲಿ ೧೧ ಕೃತಿಗಳನ್ನು ಬರೆದಿರುವ ಪುಣೇಕರ್ ಅವರು ಭಾರತೀಯ ಸಂಸ್ಕೃತಿಯ ನೆಲೆಗಳಿಗೆ ತಮ್ಮ ಚಿಂತನೆಗಳನ್ನು ಹರಡಿರುವ ಪ್ರಸಿದ್ಧ ಲೇಖಕರೆಂಬುದಾಗಿ ಹರೀಶ್ ಅಭಿಪ್ರಾಯಪಡುತ್ತಾರೆ. ಇಂತಹ ಕವಿ, ವಿಮರ್ಶಕ ಲೇಖಕನನ್ನು ಈ ತಲೆಮಾರಿನ ವಿಮರ್ಶಕರು, ವಿದ್ವಾಂಸರು ಮರೆತಿರುವ ಬಗ್ಗೆ ಅವರು ವಿಷಾದಿಸುತ್ತಾರೆ. ಅಷ್ಟೇ ಅಲ್ಲ ಯೇಟ್ಸ್‌ನ ಐರ್ಲೆಂಡಿನ ಗೌರವಕ್ಕೆ ಪಾತ್ರರಾದ ಮೊಕಾಶಿ, ಬೇಂದ್ರೆ, ಕುವೆಂಪುರವರ ಸಾಲಿನಲ್ಲಿರುವ ಲೇಖಕರು ಅವರನ್ನು ಅಲಕ್ಷ್ಯಕ್ಕೆ ಗುರಿ ಮಾಡಿರುವ ವಿಮರ್ಶಕರ ಕ್ರಮವನ್ನು ಅವರು ಟೀಕಿಸುತ್ತಾರೆ. ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡಿರುವ ಇಂತಹ ಮಹನೀಯರ ಕುರಿತು ಅಲಕ್ಷ್ಯ ತಾಳದೆ ವಿಮರ್ಶಕರು ಸಾಹಿತ್ಯ ವಿಮರ್ಶೆಯಲ್ಲಿ ಅವರನ್ನು ಚರ್ಚಿಸಬೇಕೆಂಬ ಆಶಯವನ್ನು ಅವರು ವ್ಯಕ್ತಪಡಿಸುತ್ತಾರೆ.

ಸಾಹಿತ್ಯ ವಿಮರ್ಶೆ ನಡೆದು ಬಂದಿರುವ ಚರಿತ್ರೆಯನ್ನು ಹಾಗೂ ಅದರ ಹಿನ್ನೆಲೆಯನ್ನು 'ಬೆಳಕಿನಾಟ' ಕೃತಿ ಪ್ರಸ್ತಾಪಿಸುತ್ತದೆ. ಕವಿ ಕಾವ್ಯ ಕುರಿತು ವಿದ್ವತ್ಪೂರ್ಣವಾದ ಸಾಂಸ್ಕೃತಿಕ ಪರಂಪರೆಯ ಅಧ್ಯಯನವೇ ಸಾಂಸ್ಕೃತಿಕ ವಿಮರ್ಶೆ. ಅಂಥ ಪಾಂಡಿತ್ಯಪೂರ್ಣ ಸಂಶೋಧನೆಯು ಸೃಜನಶೀಲ ಸಾಹಿತ್ಯಕ್ಕೆ ಪೂರಕವಾದುದು. ಆದರೆ ಇಂದು ವಿದೇಶದಿಂದ ಆಮದಾಗಿರುವ ಆಧುನಿಕ ಸಾಹಿತ್ಯದ ನವೋದಯ ಮತ್ತು ನವ್ಯ ವಿಮರ್ಶೆಯಿಂದ ಭಾರತೀಯ ಸಂಸ್ಕೃತಿಗೆ ಧಕ್ಕೆ ಒದಗಿದೆ ಎಂದು ಅವರು ಟೀಕಿಸುತ್ತಾರೆ. ಸಾಂಸ್ಕೃತಿಕ ವಿಮರ್ಶೆ ಮೂಲತಃ ವಸ್ತು ಪ್ರಧಾನವಾಗಿ ಕವಿ, ಕಾವ್ಯ, ನಿಷ್ಠವಾದುದು. ನವ್ಯ ವಿಮರ್ಶೆ ಕೃತಿಗೆ ನಿಷ್ಠವಾಗಿ ಸಂಸ್ಕೃತಿಯನ್ನು ಕಡೆಗಣಿಸಿತೆಂದು ಹರೀಶ್ ಅವರು ಹೇಳುವರು. ನಮ್ಮ ವಿಮರ್ಶೆಯಿಂದ ಭಾಷೆ ಕ್ಲಿಷ್ಟವಾಯಿತು. ಲೇಖಕರ ಮತ್ತು ಓದುಗರ ನಡುವೆ ಅಂತರ ಹೆಚ್ಚಿತು ಎಂದು ನವ್ಯ ವಿಮರ್ಶೆಯ ಹಾನಿಯನ್ನು ಈ ಕೃತಿ ತೀವ್ರವಾಗಿ ವಿಮರ್ಶಿಸುತ್ತದೆ. ಕನ್ನಡ ಸಾಹಿತ್ಯಕ್ಕೆ ನವ್ಯ ವಿಮರ್ಶೆ ಅಪರೂಪದ ಕೊಡುಗೆ ಕೊಟ್ಟಿದೆ. ಎಂದು ನಂಬಿರುವ ವಿಮರ್ಶಕರು ಮತ್ತು ಸಾಹಿತಿಗಳಿಗೆ ಈ ಟೀಕೆಯಿಂದ ಮುಜುಗರವಾಗಬಹುದು. ಇಡೀ ನವ್ಯ ವಿಮರ್ಶೆಯನ್ನು ಸಾಂಸ್ಕೃತಿಕ ವಿಮರ್ಶೆಯೆಂದು ಹರೀಶ್‌ರವರು ಒಪ್ಪುವುದಿಲ್ಲ.

## ೫.೬. ಕವಿತಾ ರೈ : ಸಾಹಿತ್ಯಕ ಪರಿಕಲ್ಪನೆ

ಕವಿತಾ ರೈರವರು ಭಾರತಕ್ಕೆ ವಸಾಹತುಶಾಹಿ ಪ್ರವೇಶಿಸಿದ ಮೇಲೆ ಸಾಹಿತ್ಯಕವಾಗಿ ಆದ ಬದಲಾವಣೆಯ ಕುರಿತು ಹೇಳುತ್ತಾ ಇಂಗ್ಲೀಷ್ ವಿದ್ಯಾಭ್ಯಾಸ, ಆಧುನಿಕ ತಂತ್ರಜ್ಞಾನಗಳ ಪ್ರವೇಶ, ಶಿಕ್ಷಿತ ಮಧ್ಯಮ ವರ್ಗದ ಹುಟ್ಟು, ಇವುಗಳ ಮೇಲೆ ವಸಾಹತುಶಾಹಿಯ ಪ್ರಭಾವವಿದೆ. ಇದರಿಂದಾಗಿ ಭಾರತೀಯ ಸಾಹಿತ್ಯ ಪರಂಪರೆ ಅನಿವಾರ್ಯವಾಗಿ ಪಾಶ್ಚಾತ್ಯ ಸಾಹಿತ್ಯದ ಸಂಸರ್ಗಕ್ಕೆ ಒಳಗಾಗಿದೆ ಎಂದು ಭಾವಿಸುತ್ತಾರೆ. ಹೊಸ ಸಾಹಿತ್ಯ ಪ್ರಕಾರಗಳು ಅಭಿವ್ಯಕ್ತಿ ಮಾಧ್ಯಮವಾಗಿ ವಸಾಹತುಶಾಹಿ ಕಾಲಘಟ್ಟದಲ್ಲಿ (ಸಾನೆಟ್, ಭಾವಗೀತೆ, ಸಣ್ಣಕಥೆ, ನಾಟಕ, ಕಾದಂಬರಿ) ನೆಲೆ ಕಂಡುಕೊಂಡಿವೆ. ಆದ್ದರಿಂದಲೇ ವಸಾಹತುಶಾಹಿ ಕಾಲದ ಪ್ರವೇಶವು ಸಾಹಿತ್ಯಕವಾಗಿ ಉಪಯೋಗವಾಗಿರುವುದರಿಂದ ಪಾಶ್ಚಾತ್ಯ ಸಾಹಿತ್ಯದ ಕಡೆ ಕವಿತಾ ರೈ ಅವರ ಒಲವು ವ್ಯಕ್ತವಾಗಿದೆ. ಸತ್ವಶೀಲತೆಯನ್ನು ಕಳೆದುಕೊಂಡಿದ್ದ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳು, ಅನ್ಯ ಸಂಸ್ಕೃತಿಯ ಪ್ರಭಾವದಿಂದ ಸತ್ಯಶೀಲತೆ ಪಡೆದು ಮರುಶೋಧನೆಗೆ ಪ್ರಯತ್ನಿಸಿರುವುದು ಸಾಹಿತ್ಯಕವಾಗಿ ಒಳ್ಳೆಯ ಬೆಳವಣಿಗೆಯೆಂದು ಅವರು ಅಭಿಪ್ರಾಯಪಡುತ್ತಾರೆ.

ಕವಿತಾರವರು "ಸ್ತ್ರೀ ಶಿಕ್ಷಣವು ಮತ್ತು ಸುಧಾರಣೆ ಎನ್ನುವ ಧೋರಣೆಯು ಭಾರತೀಯ ಮಹಿಳೆಯರನ್ನು ಆಧುನಿಕ ವಿದ್ಯಾಭ್ಯಾಸವನ್ನು ಪಡೆದ ವೈದಿಕೀಕರಣಗೊಂಡ ಸ್ತ್ರೀಯರನ್ನಾಗಿ ಪರಿವರ್ತಿಸಿತು. ಇದು ಬರವಣಿಗೆಗಳಲ್ಲಿ ಕೂಡ ಪ್ರಮುಖವಾಗಿ ವ್ಯಕ್ತವಾಯಿತೆಂದು ಹೇಳುತ್ತಾರೆ. ಕನ್ನಡ ಸಂದರ್ಭದಲ್ಲಿ ಮೊದಲ ಸಾಮಾಜಿಕ ಕಾದಂಬರಿಗಳಿಂದಲೇ ಇದನ್ನು ನಾವು ಗುರುತಿಸಬಹುದು. ಅಲ್ಲದೆ ಮೊದಲ ತಲೆಮಾರಿನ ಮಹಿಳಾ ಬರಹಗಾರರು ಕೂಡ ಆದರ್ಶನಾರಿಯ ಪ್ರತಿಮೆಗಳನ್ನು ಪ್ರತಿಪಾದಿಸಿದರೆಂದು ಅವರು ಗುರುತಿಸುತ್ತಾರೆ. ಇಷ್ಟೇ ಅಲ್ಲದೇ ದೇಶೀಯವಾಗಿ ಹೆಚ್ಚಿನ ಬರಹಗಾರರು ಮಹಿಳೆಯರನ್ನು ಕುರಿತು ಪಾರಂಪರಿಕ ಮೂಲ ಮಾದರಿಗಳಿಗೆ ಪ್ರತಿಸ್ಪಂದಿಸಿರುವುದನ್ನು ಚರ್ಚಿಸುತ್ತಾರೆ. ಹಿಗಾಗಿಯೇ ಕಾದಂಬರಿಗಳ ಮೂಲಕ ಮಹಿಳೆಯನ್ನು ಆದರ್ಶ ಪ್ರತಿಮೆಗಳ ಮೂಲಕ ಚಿತ್ರಿಸಿರುವ ಸಾಹಿತ್ಯವು ಅವರಿಗೆ ಪ್ರಿಯವಾಗುತ್ತದೆ.

ಕವಿತಾ ಅವರು ಪ್ರತಿಭಾರ 'ಸಾವು ಹುಡುಗಿಯರೇ ಹೀಗೆ', 'ಈತನಕ ರಸ್ತೆಯಂಚಿನ ಗಾಡಿ', 'ಕವಡೆಯಾಟ', 'ಆಹಾ ಪುರುಷಾಕಾರಂ' ಮೊದಲಾದ ಸಂಕಲನಗಳನ್ನು ಮೇಲಿನ ವಾದಕ್ಕೆ ಪುರಾವೆಯಾಗಿ ಕೊಡುತ್ತಾರೆ. ಈ ಸಂಕಲನಗಳ ಹೆಚ್ಚಿನ ಕವನಗಳು ಅನುಭವ ವೇದ್ಯವಾದವು. ಓದುಗರಲ್ಲಿ ನಿಂತಲ್ಲಿ ನೆಲೆಯೂರದೆ ತೇಲುತ್ತ ನೆನಪಿನಲ್ಲಿ ಉಳಿಯುವಂಥವುಗಳೆಂದು ಪ್ರತಿಭಾ ಕಾವ್ಯದ ಬಗ್ಗೆ ಪ್ರೀತಿಯನ್ನು ಅವರು ವ್ಯಕ್ತಪಡಿಸುತ್ತಾರೆ. ನಿರ್ದಿಷ್ಟ ಸಾಂಸ್ಕೃತಿಕ ವಲಯಗಳಲ್ಲಿ ಹುಟ್ಟಿದ ಇಲ್ಲಿನ ಕವನಗಳು ಅವುಗಳ ಭಾಷಿಕ ಹಾವಭಾವದಿಂದಲೇ ನಿಗೂಢವಾದ ಬಗೆಯಲ್ಲಿ ಓದುಗರನ್ನು ಪ್ರಭಾವಿಸುತ್ತವೆ ಎಂದು ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ತನ್ನತನವನ್ನು ಉಳಿಸಿಕೊಳ್ಳಲು ತೀವ್ರವಾಗಿ ತಹತಹಿಸುವ ಪ್ರತಿಭಾ ಕವನಗಳಲ್ಲಿ ಕಾವ್ಯಪರಂಪರೆಯನ್ನು ಸಕಾರಣ ಪೂರ್ವಕವಾಗಿ ಒಪ್ಪಿಕೊಳ್ಳುವುದು ಅವರಿಗೆ ಒಪ್ಪಿತವಾಗುತ್ತದೆ. ಅನುಭವ, ನಿರ್ದಿಷ್ಟ ಸಾಂಸ್ಕೃತಿಕ ವಲಯಗಳಲ್ಲಿ, ಅಸ್ತಿತ್ವವನ್ನು ಹುಡುಕಾಡುವ ಪ್ರತಿಭಾರ ಸಾಹಿತ್ಯವು ಅವರಿಗೆ ಪ್ರಿಯವಾಗುತ್ತದೆ.

ಇತ್ತೀಚಿಗೆ ಜನರ ಮನಸ್ಸನ್ನು ಆಕರ್ಷಿಸುತ್ತಿರುವ ಜನಪದ ಸಾಹಿತ್ಯದ ನಿರ್ಮಾಣದ ಹಿಂದೆ ಹಲವು ಅಜ್ಞಾತ ಹೆಂಗಳೆಯರು ಕಾರಣರಾಗಿದ್ದಾರೆಂದು ಕವಿತಾ ಅವರು ಹೇಳುತ್ತಾರೆ. ಹೀಗೆ ಸ್ತ್ರೀವಾದಿ ನೆಲೆಯಲ್ಲಿ ಜನಪದ ಸಾಹಿತ್ಯವನ್ನು ಪರಾಮರ್ಶಿಸುವ ಅವರಲ್ಲಿ ಸ್ತ್ರೀಪರ ಧ್ವನಿಯಿರುವುದು ಗಮನಕ್ಕೆ ಬರುತ್ತದೆ. ಪ್ರೌಢಕಾವ್ಯಕ್ಕೂ, ವಚನ ಸಾಹಿತ್ಯಕ್ಕೂ, ದಾಸಸಾಹಿತ್ಯಕ್ಕೂ ಕೆಲವೊಂದು ಉಚ್ಚಕುಲದ ಉಚ್ಚ ಸಂಸ್ಕೃತಿಯ ಸ್ತ್ರೀಯರು ಕಾರಣವಾದರೆ, ಜನಪದ ಸಾಹಿತ್ಯ ನಿರ್ಮಾಣಕ್ಕೆ ನಮ್ಮ ಹಳ್ಳಿಯ ಹೆಂಗಸರು ಕಾರಣರಾಗಿದ್ದಾರೆಂದು ಕವಿತಾ ಅಭಿಪ್ರಾಯಪಡುತ್ತಾರೆ. ಮುಂದಿನ ಜಾನಪದ ವಿದ್ವಾಂಸರು ಹಾಗೂ ವಿಮರ್ಶಕರು ಜಾನಪದ ಸಾಹಿತ್ಯವನ್ನು ಸ್ತ್ರೀವಾದಿ ನೆಲೆಯಲ್ಲಿ ನೋಡಬೇಕೆಂಬ ಆಶಯ ಅವರದಾಗಿದೆ.

### ೫.೭. ಹೊಸ ತಲೆಮಾರಿನ ವಿಮರ್ಶಕರ ತೌಲನಿಕ ವಿಶ್ಲೇಷಣೆ

* ವಿಕ್ರಮ ವಿಸಾಜಿ ಕನ್ನಡ ಅಧ್ಯಾಪಕರೂ ವಿಮರ್ಶಕರೂ ಸ್ವತಃ ಕವಿಗಳೂ ಆಗಿದ್ದಾರೆ. ಆದ್ದರಿಂದ ತಮ್ಮ ಲೇಖನ ಮತ್ತು ಕವನಗಳನ್ನು ಬಳಸಿಕೊಳ್ಳುವ ಮೂಲಕ ಕಾವ್ಯಾತ್ಮಕ ಸ್ಪರ್ಶವನ್ನು ತಂದಿರುವುದು ಅವರ ಬರಹದ ವಿಶೇಷತೆಯಾಗಿದೆ. ಕಥನಾತ್ಮಕ ಶೈಲಿಯಾಗಿ ವಿಷಯವನ್ನು ಅವರು ಭೋದಿಸುತ್ತಿರುವಂತೆ ಭಾಸವಾಗುತ್ತದೆ. ಇದಕ್ಕೆ ಅವರು ಅಧ್ಯಾಪಕರಾಗಿರುವುದು ಒಂದು ಕಾರಣವಾಗಿರಬಹುದು. ಅವರು ಹಿರಿಯ ತಲೆಮಾರಿನವರ ಮೂಲಕ ಜೀವನ ಪ್ರೀತಿಯನ್ನು ಕಟ್ಟುವ, ಪ್ರಾದೇಶಿಕ ಸೊಗಡನ್ನು ಹರಡುವ ಹಾಗೂ ಕಿರಿಯ ಲೇಖಕರಿಂದ ಬದುಕನ್ನು ಕಟ್ಟಿ ಬೆಳೆಸುವ ಪ್ರಮುಖ ವಿಮರ್ಶಕರಾಗಿ ಕಾಣುತ್ತಾರೆ.

* ಜೋಗಿಯವರು ತೇಜಸ್ವಿಯರ ಸೃಜನಶೀಲ ಸಾಹಿತ್ಯ ಮತ್ತು ನಿಗೂಢತೆಯನ್ನು ಹೇಳುವ ಮೂಲಕ ಪಾಶ್ಚಾತ್ಯ ಶ್ರೇಷ್ಠ ಲೇಖಕರ ಜೊತೆಗೆ ಅವರನ್ನು ತಂದು ನಿಲ್ಲಿಸುತ್ತಾರೆ. ಕನ್ನಡದ ಲೇಖಕನ ಅದೇ ಗುಣದ ಇನ್ನೊಬ್ಬ ಲೇಖಕನೊಂದಿಗೆ ಗುರುತಿಸುವ ಅವರ ವಿಮರ್ಶೆಯ ತೌಲನಿಕ ಗುಣ ವಿಶಿಷ್ಟವಾಗಿದೆ. ಅದರಲ್ಲಿಯೂ ಪಾಶ್ಚಿಮಾತ್ಯ ಲೇಖಕರೊಂದಿಗೆ ಕನ್ನಡ ಲೇಖಕರನ್ನು ಸಮೀಕರಿಸಿ ಹೇಳುವುದು ಅವರ ವಿಮರ್ಶೆಯ ವ್ಯಾಪಕ ಓದನ್ನು ತಿಳಿಸುತ್ತದೆ.

* ಜೋಗಿಯವರ ಲೇಖನಗಳನ್ನು ಗಮನಿಸಿದಾಗ ಅವರು ಹೆಚ್ಚಾಗಿ ನವ್ಯ ಲೇಖಕರಾದ ಅನಂತಮೂರ್ತಿ, ತೇಜಸ್ವಿ, ಲಂಕೇಶ್ ಇವರನ್ನು ಹೆಚ್ಚಾಗಿ ವಿಶ್ಲೇಷಿಸುವುದು ಕಂಡುಬರುತ್ತದೆ.

ನವೋದಯದ ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿಯವರು ಒಂದೆರಡು ಲೇಖನದಲ್ಲಿ ಕಾಣಿಸುತ್ತಾರೆ. ಇದನ್ನು ಗಮನಿಸಿದರೆ ಜೋಗಿ ಅವರಿಗೆ ಅವರಿಗೆ ಹಿರಿಯ ಲೇಖಕರ ಸಾಹಿತ್ಯ ಕುರಿತ ಓದು ಅಷ್ಟು ವ್ಯಾಪಕವಾಗಿಲ್ಲದಿರುವುದು ತಿಳಿಯುತ್ತದೆ. ಆದರೆ ಹೆಚ್ಚಿನ ಹೊಸತಲೆಮಾರಿನ ವಿಮರ್ಶಕರು ಕನ್ನಡ ಅಧ್ಯಾಪಕರಾಗಿರುವುದರಿಂದ ಅವರಲ್ಲಿ ಬೇರೆ ಬೇರೆ ಹಿರಿಯ ಕವಿಗಳ ಉಲ್ಲೇಖ ಹೆಚ್ಚಾಗಿ ಕಾಣಿಸುತ್ತದೆ. ವಿಸಾಜಿಯವರು ಹೆಚ್ಚಾಗಿ ಯುವ ಬರಹಗಾರರ ಪಟ್ಟಿಯನ್ನೇ ಕೊಟ್ಟುಬಿಟ್ಟರೆ, ತಾರಿಣಿಯವರು ಮಹಿಳಾ ಸಾಹಿತಿಗಳು ಮತ್ತು ಪಾಶ್ಚಾತ್ಯ ಸಾಹಿತಿಗಳನ್ನು ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ. ಕವಿತಾರವರ ಲೇಖನಗಳಲ್ಲಿ ಕನ್ನಡ ಲೇಖಕಿಯರ ಪ್ರಸ್ತಾಪ ಅಷ್ಟಾಗಿ ಇಲ್ಲದೆ ಇರುವುದನ್ನು ಗಮನಿಸಬಹುದಾಗಿದೆ.

* ಬಿ.ಎಂ.ಪುಟ್ಟಯ್ಯರವರು ಪ್ರಾಚೀನ ಕೃತಿ ಮತ್ತು ಕಥೆಗಳನ್ನು ಕೆಳಸ್ತರದ ಜನರನ್ನು ಮೇಲುಸ್ತರದವರು ಕಡೆಗಣಿಸಿರುವುದನ್ನು ತಿಳಿಸುತ್ತಾರೆ. ದಲಿತ ಸಾಹಿತಿಗಳ ಪ್ರಸ್ತಾಪ ಅವರ ಲೇಖನಗಳಲ್ಲಿ ಹೆಚ್ಚಾಗಿ ಇದೆ. ದಲಿತ ಸಾಹಿತ್ಯದಲ್ಲೇ ಇರುವ ವೈರುಧ್ಯಗಳನ್ನು ಎತ್ತಿಕೊಂಡು ಅವರು ವಿಮರ್ಶಿಸುತ್ತಾರೆ. ದಲಿತ ಸಾಹಿತ್ಯದ ಮೇಲೆ ರಮ್ಯ ವಿಮರ್ಶೆಯನ್ನು ಬರೆದು ಅದನ್ನು ಆಳವಾಗಿ ನೋಡದೆ ಇರುವ ಇಂದಿನ ವಿಮರ್ಶಾ ಕ್ರಮವನ್ನು ಅವರು ಟೀಕಿಸುತ್ತಾರೆ. ಇಡೀ ಕೃತಿಯಲ್ಲಿ ದಲಿತರ ಬದುಕಿನ ಶೋಷಣೆಯನ್ನು ಕೆಳ ಸಮುದಾಯದ ಬಗೆಗಿನ ಜೀವನ ಪ್ರೀತಿಯನ್ನು ಪ್ರಕಟಿಸುವ ಪುಟ್ಟಯ್ಯನವರು ಹೊಸ ತಲೆಮಾರಿನ ಪ್ರಮುಖ ವಿಮರ್ಶಕರಾಗಿ ಕಾಣುತ್ತಾರೆ.

* ಹರೀಶ್ ಅವರಲ್ಲಿ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಅಷ್ಟು ಪ್ರಧಾನವಾಗಿ ಚರ್ಚೆಗೆ ಒಳಗಾಗದ ಲೇಖಕರ ಬಗ್ಗೆ ಕಾಳಜಿಯಿದೆ. ಅಂತಹ ಬರಹಗಾರರನ್ನು ಅವರು ವಿಮರ್ಶೆಗೆ ಒಳಪಡಿಸಿ ಅವರ ಸಾಹಿತ್ಯಿಕ ಮೌಲ್ಯಗಳನ್ನು ತಿಳಿಸುತ್ತಾರೆ. ಕವಿಯಾದವನು ಒಂದು ಧರ್ಮದಲ್ಲಿನ ಸಮಾಜವನ್ನು ಮಾತ್ರ ಅವಲೋಕಿಸದೆ, ಬಹುಮುಖಿ ನೆಲೆಯಲ್ಲಿ ಸಮಾಜವನ್ನು ಅರ್ಥೈಸುವ ಗುಣವನ್ನು ಗುರುತಿಸಬೇಕೆಂದು ಭಾವಿಸುವ ಭಿನ್ನ ಆಲೋಚನಾ ಕ್ರಮ ಹರೀಶ್‌ರವರದ್ದಾಗಿದೆ. ಇತರೆ ವಿಮರ್ಶಕರಿಗೆ ಹೋಲಿಸಿದರೆ ಹರೀಶ್ ಅವರು ಸಾಹಿತ್ಯಕ ಅಧ್ಯಯನದಲ್ಲಿ ಇನ್ನೂ ಆಳವಾಗಿ ತೊಡಗಿಸಿಕೊಂಡಿಲ್ಲದಿರುವುದು ತಿಳಿಯುತ್ತದೆ. .

* ಕವಿಯ ಕವಿತೆಯ ಮೂಲಕ ದೇಸಿಯ ಪ್ರಜ್ಞೆಯನ್ನು ಕಟ್ಟಿಕೊಡುವ ತಾರಿಣಿಯವರು ಹೊಸ ತಲೆಮಾರಿನ ವಿಮರ್ಶಕರಲ್ಲಿ ವಿಭಿನ್ನರಾಗಿದ್ದಾರೆ. ಜಾಗತೀಕರಣಕ್ಕೆ ವಿರುದ್ಧವಾಗಿ ಬಂದದ್ದು ನೆಲದ ಸಂಸ್ಕೃತಿ ಎಂಬುದಾಗಿ ಅವರು ಗ್ರಹಿಸಿದರೆ, ಕವಿತಾ ಅವರು ಜಾಗತೀಕರಣದಿಂದಲೇ ನಮ್ಮಲ್ಲಿ ದೇಶೀಯ ಚಿಂತನೆಗಳು ಬಂದವು ಎನ್ನುತ್ತಾರೆ. ವಸಾಹತುಶಾಹಿ ಪ್ರೇರಣೆಗಳೇ ಕವಿತಾರವರ ಲೇಖನದ ಮುಖ್ಯವಸ್ತು. ವಸಾಹತುಶಾಹಿ ಮತ್ತು ಜಾಗತೀಕರಣದ ನೆರಳಲ್ಲಿ

ಸ್ತ್ರೀಯ ಅಸ್ತಿತ್ವವನ್ನು ಕವಿತಾರವರು ಹುಡುಕಿದರೆ, ಸ್ತ್ರೀ ವಿಮರ್ಶೆಯ ನೆಲೆಯಲ್ಲಿ ಹಾಗೂ ದೇಶೀಯ ನೆಲೆಯಲ್ಲಿ ಕನ್ನಡ ಬರಹಗಾರ್ತಿಯರ ಮೂಲಕ ತಾರಿಣಿ ಮಹಿಳೆಯರನ್ನು ಗುರುತಿಸುತ್ತಾರೆ.

* ಜೋಗಿಯವರು ಪತ್ರಕರ್ತ ಮತ್ತು ಕಥೆಗಾರ ಆಗಿರುವುದರಿಂದ ಬಹುಮುಖಿ ನೆಲೆಯಲ್ಲಿ ವಿಮರ್ಶೆಯನ್ನು ಮಾಡುತ್ತಾರೆ. ವೈ.ಎನ್.ಕೆ.ಯವರ ಬಗ್ಗೆ ಹೇಳುತ್ತಲೇ ಅವರಿಂದ ಬೆಳೆದ ಕವಿಗಳು ಹಾಗೂ ವಿಮರ್ಶಕರು ನಮಗೆ ಮಾದರಿಯೆಂದು ಹೇಳುತ್ತಾರೆ. ಅದರಂತೆ ನಾವುಗಳು ಹಿರಿಯ ವ್ಯಕ್ತಿಗಳನ್ನು ತಿರಸ್ಕಾರ ಮಾಡದೇ ಅವರೊಂದಿಗೆ ಬೆರೆತು ಬೆಳೆಯಬೇಕೆಂಬ ಕಾಳಜಿ ಅವರಲ್ಲಿ ವ್ಯಕ್ತವಾಗುತ್ತದೆ. ಜೋಗಿಯವರ ವಿಮರ್ಶೆಯು ಚಿಕಿತ್ಸಕ ಗುಣವನ್ನು ಹೊಂದಿದೆ. ಬರಹಗಾರ, ವಿಮರ್ಶೆ, ಸಾಹಿತ್ಯವೆಂದರೆ ಹೇಗಿರಬೇಕು ಎಂಬ ಬಗ್ಗೆ ಅರಿವನ್ನು ದಕ್ಕಿಸಿಕೊಳ್ಳಬೇಕೆಂಬ ಮಾರ್ಗದರ್ಶನ ಅವರಲ್ಲಿ ಇದೆ. ಒಂದು ವಿಷಯವನ್ನು ಹೇಳುತ್ತಲೇ ಮಾರ್ಗದರ್ಶನ ಮಾಡುವ ಕಲೆಗಾರಿಕೆ ಅವರಿಗೆ ಇರುವುದು ಕಾಣುತ್ತದೆ.

**ಟಿಪ್ಪಣಿಗಳು:**

೧. ವಿಕ್ರಮ ವಿಸಾಜಿ, ಬೆಳಗಿನ ಮುಖ, ಪು.೪

೨. ಬಿ.ಎಂ. ಪುಟ್ಟಯ್ಯ, ಕದಡು, ಪು.೫

೩. ಅದೇ, ಪು.೪೬

೪. ಜೋಗಿ, ಜಾನಕಿ ಕಾಲಂ, ಪು.೫೪.

೫. ಅದೇ, ಪು.೫೪.

೬. ಅದೇ, ಪು.೫೬.

೭. ಅದೇ, ಪು.೮೪

೮. ಅದೇ, ಪು.೧೧೪.

೯. ಅದೇ, ಪು.೧೦೪

೧೦. ತಾರಿಣಿ ಶುಭದಾಯಿನಿ, ಹೆಡೆಯಂತಾಡುವ ಸೊಡರು, ಪು.೨೦

೧೧. ಜಿ.ಬಿ. ಹರೀಶ್, ಬೆಳಕಿನಾಟ, ಪು.೧೨.

# ಅಧ್ಯಾಯ ೬

# ಹೊಸ ತಲೆಮಾರಿನ ವಿಮರ್ಶಕರು : ಅಭಿವ್ಯಕ್ತಿ ಕ್ರಮ

## ೬.೧. ವಿಕ್ರಮ ವಿಸಾಜಿ : ಅಭಿವ್ಯಕ್ತಿ ಕ್ರಮ

ಹೈದ್ರಾಬಾದ್ ಕರ್ನಾಟಕವು ಸಾಮಾಜಿಕ ಆರ್ಥಿಕವಾಗಿ ಮಾತ್ರವಲ್ಲ ಸಾಹಿತ್ಯಕವಾಗಿ ಸಹ ಹಿಂದುಳಿದ ಪ್ರದೇಶವಾಗಿದೆ. ಅದನ್ನು ವಿಕ್ರಮ ವಿಸಾಜಿಯವರು ಚಾರಿತ್ರಿಕ ಕ್ರಮದಲ್ಲಿ ಆ ಭಾಗದ ಸಾಹಿತ್ಯ ಮತ್ತು ಕವಿಗಳನ್ನು ಪರಿಚಯಿಸುತ್ತಾರೆ. ಉದಾಹರಣೆಗೆ: ವಚನಸಾಹಿತ್ಯ, ದಾಸಸಾಹಿತ್ಯ, ಅಭಿವ್ಯಕ್ತಿಕ್ರಮವಾಗಿ ಬೆಳೆದುಬಂದಿದ್ದು ಇಲ್ಲೆ. ಆದರೆ ಪ್ರಸ್ತುತ ಈ ಭಾಗದಿಂದ ಕವಿಗಳಾಗಲಿ, ಸಾಹಿತ್ಯವಾಗಲೀ ಹೇಳಿಕೊಳ್ಳುವ ಮಟ್ಟಿಗೆ ಬರುತ್ತಿಲ್ಲ. ಹೀಗಾಗಿ ಹಿರಿಯ ಲೇಖಕರ ಮೂಲಕ ಹೊಸತಲೆಮಾರನ್ನು ಕಟ್ಟಬೇಕು ಎಂಬ ಕಾಳಜಿ ಅವರಲ್ಲಿ ಪ್ರಕಟವಾಗುತ್ತದೆ.

ವಿಕ್ರಮ ವಿಸಾಜಿಯವರ ಬರಹವು ನಿರೂಪಣಾತ್ಮಕ ಪ್ರಬಂಧದ ರೀತಿಯಲ್ಲಿ ಸಾಗುತ್ತದೆ. ವಿಷಯವನ್ನು ಹೇಳುವಾಗ ಬಳಸುವ ನೈತಿಕತೆ, ಆದರ್ಶ, ಮೌಲ್ಯ, ತತ್ವಪದ, ತಾತ್ವಿಕತೆ, ಬರಹ ಪದಗಳಿಗೆ ಕೊಡುವ ಉದಾಹರಣೆಗಳು ಹೆಚ್ಚು ಅರ್ಥವಂತಿಕೆಯಿಂದ ಕೂಡಿವೆ.

ವಿಸಾಜಿಯವರು ಒಂದು ಸಮಸ್ಯೆ ಅಥವಾ ವಿಷಯವನ್ನು ತಿಳಿಸಲು ಬೇರೆ ಬೇರೆ ಕವಿಗಳ ಕಾವ್ಯವನ್ನು ತೆಗೆದುಕೊಳ್ಳುತ್ತಾರೆ. ಆ ಮೂಲಕ ಓದುಗರಿಗೆ ಬೇಗ ವಿಷಯ ಅರ್ಥವಾಗಲು, ಅನುಕೂಲವಾಗುವಂತೆ ಮಾಡುತ್ತಾರೆ. "೧೯೪೭ರಲ್ಲಿ ಶಾಂತರಸರು ಸಂಪಾದಿಸಿದ 'ಮುಸುಕು ತೆರೆ' ಸಂಕಲನದಲ್ಲಿ ಕಾವ್ಯಾನಂದರ 'ಮುಸಕು ತೆಗೆ ಮಾನಿನಿ'ಯೆ ಸಾಹಿತ್ಯ ಕಾಮಿನಿಯು"[೧] ಎಂಬ ರೀತಿಯ ಪದ್ಯದ ಸಾಲನ್ನು ಅವರು ಉದಾಹರಿಸುತ್ತಾರೆ. ಈ ಮೂಲಕ ಹೈದ್ರಾಬಾದ್ ಕರ್ನಾಟಕದಲ್ಲಿ ಹೊಸಗನ್ನಡ ಕಾವ್ಯದ ಮುಸುಕು ತೆರೆಯುವ ಕ್ರಿಯೆಯನ್ನು ಈ ಕವಿತೆ ಸಾಂಕೇತಿಕವಾಗಿ ಧ್ವನಿಸುತ್ತದೆ ಎನ್ನುತ್ತಾರೆ. ಇದರ ಜೊತೆಗೆ ಕವನದಲ್ಲಿ ನವೋದಯ ಮನೋಧರ್ಮದ ಭಾವ ಮತ್ತು ಭಾಷೆಯನ್ನು ಕಾಣಬಹುದಾಗಿದೆ ಎಂದು ಹೇಳುತ್ತಾರೆ. ಇದು ವಿಸಾಜಿಯವರು ಕಾವ್ಯ ಪ್ರೀತಿಯ ಬಗೆಗಿನ ಒಲವನ್ನು ಸಹ ತೋರಿಸುತ್ತದೆ.

ಒಂದು ಸನ್ನಿವೇಶ ಅಥವಾ ಘಟನೆಯನ್ನು ಕುರಿತು ಹೇಳುವಾಗ ಅದರ ಹಿಂದಿರುವ ಕಾರಣವೇನು ಎಂದು ವಿಸಾಜಿ ಹೇಳುವುದಿಲ್ಲ. ಖಚಿತವಾಗಿ ಏನನ್ನೂ ಹೇಳದೆ ಮೌನವಾಗಿಯೇ ಬದಲಾವಣೆಯಾಗಬೇಕು ಎಂಬ ಧ್ವನಿ ಅವರಲ್ಲಿರುವುದು ಗಮನಕ್ಕೆ ಬರುತ್ತದೆ. ಒಬ್ಬ ಸೃಜನಶೀಲ ಬರಹಗಾರನು ಜಾಣ್ಮೆಯನ್ನು ಪ್ರದರ್ಶಿಸಿರುವುದು ಕೆಲವು ಕಡೆ ಗುರುತಿಸಬಹುದಾಗಿದೆ.

ಹೊಸ ತಲೆಮಾರಿನ ಬರಹಗಾರರನ್ನು ಪರಿಚಯಿಸುವಾಗ ಅವರ ತಾತ್ವಿಕ ದೃಷ್ಟಿಕೋನವನ್ನು ಅಥವಾ ಕಾವ್ಯದ ಮೂಲಕ ಅವರ ಮನೋಭಾವವನ್ನು ಹೇಳುವ ಕಲೆಯನ್ನು ಅವರ ವಿಮರ್ಶಾ ಕೃತಿಯಲ್ಲಿ ಗಮನಿಸಬಹುದು. “ತನ್ನ ಊರುಕೇರಿಗಳ ಬದುಕಿನೊಳಗಿನಿಂದ ಶಕ್ತಿಯುತ ರೂಪಕ ಕಾವ್ಯ ನೇಯುತ್ತಿರುವ ಎನ್.ಕೆ. ಹನುಮಂತಯ್ಯ, ಕೋಮುವಾದದ ಉರಿಯಲ್ಲಿ ತನ್ನ ಅನುಭವಗಳಿಗೆ ಕಾವು ಕೊಡುವ ಪೀರ್‌ಬಾಷಾ, ಗ್ರಾಮೀಣ ಬದುಕನ್ನು ಕಥೆಯಾಗಿಸುವ ಕಲಿಗಣನಾಥ”[೨] ಹೀಗೆ ಲೇಖಕರೊಂದಿಗೆ ಅವರ ತಾತ್ವಿಕ ದೃಷ್ಟಿಕೋನವನ್ನು ಸಹ ವಿಸಾಜಿ ಗುರುತಿಸುತ್ತಾರೆ. ಅವರ ಕಾವ್ಯಸತ್ವ ತಿಳಿಯಲು ನವ್ಯ ಬಂಡಾಯ ಲೇಖಕರೊಂದಿಗೆ ತುಲನೆ ಮಾಡಿ ಭಿನ್ನತೆ ಅರಿಯಬೇಕು ಎನ್ನುತ್ತಾರೆ. ಈ ಮೂಲಕ ಹೊಸತಲೆಮಾರಿನ ಬರಹಗಾರರನ್ನು ಮುಖ್ಯವಾಹಿನಿಗೆ ತರುವ ಅವರ ಪ್ರಯತ್ನ ವಿಶಿಷ್ಟವಾಗಿದೆ.

**೬.೨. ಬಿ.ಎಂ.ಪುಟ್ಟಯ್ಯ : ಅಭಿವ್ಯಕ್ತಿ ಕ್ರಮ**

ಬಿ.ಎಂ. ಪುಟ್ಟಯ್ಯನವರು ‘ಹರಿಶ್ಚಂದ್ರ ಚಾರಿತ್ರ : ಸತ್ಯದ ನಿರೂಪಣೆ ಮತ್ತು ನಿಲುವಿನ ಸಮಸ್ಯೆ’ ಎಂಬ ತಮ್ಮ ಲೇಖನದಲ್ಲಿ “ಅಸಮಾನತೆ ಮತ್ತು ಶೋಷಣೆ ಇರುವ ಸಮಾಜದಲ್ಲಿ ಹಾಗೆ ಅಖಂಡವಾದ ಸಾರ್ವಕಾಲಿಕವಾದ ಹಾಗೂ ಸಾರ್ವತ್ರಿಕವಾದ ಒಂದು ಸತ್ಯ ಇರುತ್ತದೆಯೇ? ಸತ್ಯ ಎಂಬುದನ್ನು ಒಬ್ಬ ವ್ಯಕ್ತಿ ಸರಿಯಾಗಿ ನಿಷ್ಠೆಯಿಂದ ಪಾಲಿಸುತ್ತಾನೆ. ಉಳಿದವರೆಲ್ಲ ಅವನು ಪಾಲಿಸಿದ ಸತ್ಯವನ್ನು ನೋಡಿಕೊಂಡು ಅಗೋ ನೋಡಿ ಅದು ಸತ್ಯ; ಎಂದು ಹುಬ್ಬೇರಿಸುತ್ತಾರೆ”[೩] ಎಂದು ಹೇಳುತ್ತಾರೆ. ಹೀಗೆ ಕೃತಿಯೊಂದರ ಮೂಲಕ ರಾಜಪ್ರಭುತ್ವ ಹೇಗೆ ಸಾಮಾನ್ಯ ಜನರ ಮೇಲೆ ತನ್ನ ಪ್ರಭಾವವನ್ನು ಬೀರಿ ಅವರನ್ನು ಕಡೆಗಣಿಸಿದೆ ಎಂದು ವಿಶ್ಲೇಷಿಸುತ್ತಾರೆ. ಈಗಾಗಲೇ ಮೇಲ್ವರ್ಗದವರು ರೂಢಿಸಿರುವ ಸತ್ಯವನ್ನು ಚಿಕ್ಕ ಚಿಕ್ಕ ಪ್ರಶ್ನೆಗಳನ್ನು ಎತ್ತುವ ಮೂಲಕ ಕೆಳವರ್ಗದ ನೆಲೆಯಲ್ಲಿ ಸ್ಪಷ್ಟವಾಗಿ ಅವರು ಅಭಿವ್ಯಕ್ತಿಸುತ್ತಾರೆ. ನಿರೂಪಣಾತ್ಮಕ ಮಾದರಿಯಲ್ಲಿ ದಲಿತರ ಬದುಕನ್ನು ಕಟ್ಟಿಕೊಡುವ ಪ್ರಯತ್ನವನ್ನು ಅವರು ಮಾಡುತ್ತಾರೆ.

ಪುಟ್ಟಯ್ಯ ತಮ್ಮ ‘ಹರಿಶ್ಚಂದ್ರ ಚಾರಿತ್ರ’ ಲೇಖನದಲ್ಲಿ ಮೂಲ ಕಾವ್ಯದ ಪದ್ಯಗಳನ್ನು ಹೀಗೆ ಬಳಸಿಕೊಳ್ಳುತ್ತಾರೆ.

“ಭುವನದೊಳು ಹುಸಿವವಂ ಹೊಲೆಯನವನಂ ಮುಟ್ಟು
ವವರೆಲ್ಲ ಹೊಲೆಯರೆಂಬಾಗಳಾರುವನು ಮು
ಟ್ಟುವುದಿಲ್ಲಪ್ಪೆನೆನೆ ಸರ್ವಜನ ವೈರವದರಿಂದ ನಾಂ ಹೊಲೆವೇಷದ”[೪]

ಹೀಗೆ ಮೂಲ ಕಾವ್ಯದ ಸಾಲುಗಳ ಮೂಲಕ ಒಂದು ವ್ಯವಸ್ಥೆಯೊಳಗಿನ ಪುರೋಹಿತಶಾಹಿಯ ಕ್ರಮವನ್ನು ಅನಾವರಣ ಮಾಡುವ ತಂತ್ರವನ್ನು ಅವರು ಬಳಸಿಕೊಳ್ಳುತ್ತಾ,

ಹರಿಶ್ಚಂದ್ರ ಹೊಲೆಯನ ವೇಷವನ್ನು ಹಾಕಿಕೊಂಡನೇ ಹೊರತು ಅವನೇ ಹೊಲೆಯನಾಗಿ ಪರಿವರ್ತನೆಯಾಗಲಿಲ್ಲ ಎಂಬುದನ್ನು ಮೇಲಿನ ಪದ್ಯದ ಮೂಲಕ ಪ್ರಸ್ತುತ ಕಾಲಕ್ಕೆ ಹೋಲಿಕೆ ಮಾಡುತ್ತಾರೆ. ಕೆಳಜಾತಿಯವರ ವೃತ್ತಿಯನ್ನು ಮಾಡಿದರೂ ಆಹಾರದಲ್ಲಿ ಮಡಿಯನ್ನು ಕಾಪಾಡಿರುವ ಕ್ರಮವನ್ನು ತಮ್ಮದೇ ವಿಭಿನ್ನ ನೆಲೆಯಲ್ಲಿ ಪದ್ಯದೊಂದಿಗೆ ರಾಜ್ಯ ವ್ಯವಸ್ಥೆಯನ್ನು ಬಯಲಿಗೆಳೆಯುವ ಅವರ ಅಭಿವ್ಯಕ್ತಿಯ ಕ್ರಮ ವಿಶಿಷ್ಟವಾಗಿದೆ. ಎಲ್ಲವನ್ನು ಪ್ರಶ್ನೆ ಮಾಡುವ ಮೂಲಕ ಸತ್ಯಾಸತ್ಯೆಯನ್ನು ಪರಾಮರ್ಶಿಸುವ ಬಂಡಾಯ ಮನೋಭಾವದ ಬರವಣಿಗೆಯ ಕ್ರಮ ಅವರಲ್ಲಿ ವ್ಯಕ್ತವಾಗುತ್ತದೆ.

ಪುಟ್ಟಯ್ಯನವರು ಸತ್ಯ ಹರಿಶ್ಚಂದ್ರ ಕಥೆಯ ಮೂಲಕ ಆಳುವ ವರ್ಗ ಹೇಗೆ ತನ್ನ ಸಮಸ್ಯೆಯನ್ನು ಜನತೆಯ ಸಮಸ್ಯೆಯೆಂದು ಬಿಂಬಿಸಲು ಪ್ರಯತ್ನಿಸುತ್ತದೆ ಎಂದು ಹೇಳುತ್ತಾರೆ. ಇದಕ್ಕೆ ಅವರು ಕೊಡುವ ಉದಾಹರಣೆಗಳು ಕೃತಿಯಲ್ಲಿನ ವಸ್ತುವಿಗೆ ಹತ್ತಿರವಿರುವಂತೆ ತೋರುತ್ತದೆ. ಅಮೆರಿಕಾದಲ್ಲಿ ಕೆಲವೇ ಗಂಟೆ ಪವರ್ ಹೋದಾಗ ಅದನ್ನು ಇಡೀ ಜಗತ್ತಿನ ಜನರ ಕತ್ತಲೆಯ ಸಮಸ್ಯೆ ಎಂದು ಆಳುವ ಮಾಧ್ಯಮಗಳು ಬಿಂಬಿಸಿದ ರೀತಿ ಇದು. ಅಮೆರಿಕಾದಲ್ಲಿ ನಡೆದ ಸೆಪ್ಟೆಂಬರ್ ೧೧ರ ಘಟನೆಯನ್ನು ಇಡೀ ಜಗತ್ತಿನ ಜನರ ಸಮಸ್ಯೆ ಎಂದು ಬಿಂಬಿಸಿದ ಕ್ರಮ. ಹೀಗೆ ಪ್ರಸ್ತುತ ಸನ್ನಿವೇಶಕ್ಕೆ ಉದಾಹರಣೆಗಳನ್ನು ಹೋಲಿಸಿ ಹೇಳುವ ಅವರ ಅಭಿವ್ಯಕ್ತಿಯ ಕ್ರಮ ವಿಶಿಷ್ಟವಾಗಿದೆ. ಹಿಂದಿನ ಕಾಲದ ಕೃತಿಯೊಂದರ ವಸ್ತುವನ್ನು ಇಟ್ಟುಕೊಂಡು ಅದನ್ನು ಪ್ರಸ್ತುತ ಕಾಲದ ಸಮಸ್ಯೆಗಳಿಗೆ ಸಮೀಕರಿಸುವ ತಂತ್ರಗಾರಿಕೆಯು ಇವರ ಸಮಕಾಲೀನ ಪ್ರಜ್ಞೆಯನ್ನು ಸಹ ತಿಳಿಸುತ್ತದೆ.

ಪುಟ್ಟಯ್ಯನವರ ವಿಮರ್ಶಾ ಲೇಖನಗಳಲ್ಲಿ ಮುಖ್ಯವಾಗಿ ಚರ್ಚಿತವಾಗುವ ವಿಷಯ ದಲಿತರ ಬದುಕು. ಸರಳವಾಗಿ ಮೇಲ್ವರ್ಗದ ದಬ್ಬಾಳಿಕೆಯನ್ನು ಪ್ರತಿಮೆಗಳ ಮೂಲಕ ಅವರು ವಿಶ್ಲೇಷಿಸುತ್ತಾರೆ. ಒಂದು ಕೃತಿಯ ಒಳಗಿನ ದಲಿತರ ಬದುಕನ್ನು ಕಟ್ಟಿಕೊಡುವಾಗ ಅನೇಕ ಆಯಾಮಗಳಲ್ಲಿ ಪಠ್ಯವನ್ನು ಅವರು ವಿಂಗಡಿಸಿಕೊಳ್ಳುತ್ತಾರೆ. ಹೀಗೆ ವಿಂಗಡಿಸಿಕೊಳ್ಳುವ ಮೂಲಕ ಅಲ್ಲಿನ ದಲಿತರ, ಮೇಲ್ವರ್ಗದ ನಡುವಿನ ವೈರುಧ್ಯಗಳನ್ನು ಮುಖಾಮುಖಿ ಮಾಡಿ ದಲಿತರನ್ನು ಅರ್ಥೈಸುವ ಅವರ ಈ ಕ್ರಮ ಭಿನ್ನವಾಗಿದೆ.

**೬.೩. ಜೋಗಿ : ಅಭಿವ್ಯಕ್ತಿ ಕ್ರಮ**

ಜೋಗಿಯವರು ಪತ್ರಕರ್ತರೂ ಕಥೆಗಾರರೂ ಆಗಿರುವುದರಿಂದ ವಿಷಯವನ್ನು ತಿಳಿಸಲು ಸರಳವಾದ ಭಾಷೆಯನ್ನು ಪ್ರಯೋಗಿಸುತ್ತಾರೆ. ತೇಜಸ್ವಿಯವರ ಕೃತಿಗಳನ್ನು ಹಾಗೂ ಅದರೊಳಗಿನ ನಿಗೂಢ ಜಗತ್ತನ್ನು ಜೋಗಿಯವರು ಅವರ ಕೃತಿಗಳಿಂದಲೇ ಉದಾಹರಣೆಯ ಸಾಲುಗಳನ್ನು ಇಟ್ಟುಕೊಂಡು ಆಪ್ತವಾಗಿಯೇ ಹೇಳಿಬಿಡುತ್ತಾರೆ. "ಮಾಸ್ತಿ ಜೀವನ ಪ್ರೀತಿಯಿಂದ, ಬೇಂದ್ರೆ

ಮರುಳುತನದಿಂದ, ಆದರೆ ತೇಜಸ್ವಿ ಕಾಡಿನಂತೆ ಇಷ್ಟವಾಗುತ್ತಾರೆ."[೫] ಹೀಗೆ ಕಥನಾತ್ಮಕ ರೀತಿಯಲ್ಲಿ ಆಕರ್ಷಣೀಯವಾಗಿ ತೇಜಸ್ವಿಯವರನ್ನು ಓದುಗ ಲೋಕಕ್ಕೆ ತಮ್ಮದೇ ಶೈಲಿಯ ಮೂಲಕ ಅವರು ಪರಿಚಯಸುತ್ತಾರೆ.

ಕನ್ನಡದ ಲೇಖಕನನ್ನು ಅದೇ ಗುಣದ ಇನ್ನೊಬ್ಬ ಲೇಖಕನೊಂದಿಗೆ ಹೋಲಿಸಿ ಗುರುತಿಸುವ ಜೋಗಿಯವರ ಗುಣ ವಿಶಿಷ್ಟವಾಗಿದೆ. ಅದರಲ್ಲಿಯೂ ಪಾಶ್ಚಿಮಾತ್ಯ ಲೇಖಕರೊಂದಿಗೆ ಕನ್ನಡ ಲೇಖಕರನ್ನು ಗುರುತಿಸುವುದು ಹಾಗೂ ಅವರಿಬ್ಬರ ಕೃತಿಗಳಿಗಿರುವ ಸಾಮ್ಯತೆಯನ್ನು ತಿಳಿಸುವುದು. ಆ ಮೂಲಕ ಓದುಗರಿಗೆ ವಿಸ್ತೃತ ಜ್ಞಾನವನ್ನು ಬೆಳೆಸುವುದು ಜೋಗಿಯರ ವಿಮರ್ಶೆಯ ವಿಧಾನವಾಗಿದೆ. ಹೀಗೆ ಎರಡು ಸಂಸ್ಕೃತಿ ಹಾಗೂ ದೇಶಕ್ಕೆ ಸೇರಿದ ಲೇಖಕನ್ನು ತಮ್ಮದೇ ತುಲನಾತ್ಮಕ ಶೈಲಿಯಲ್ಲಿ ಸರಳವಾಗಿ ತಮ್ಮ ಲೇಖನಗಳಲ್ಲಿ ಅವರು ವಿಶ್ಲೇಷಿಸುತ್ತಾರೆ. ಅಷ್ಟೇ ಅಲ್ಲದೇ ಪಾರ್ಟಿ, ರಿವ್ಯೂ, ಫ್ರಾಡ್, ರಿಫೀಟು, ಅಪ್‌ಡೇಟ್, ವಾಲ್ಯೂಮ್, ಬ್ರೌಸ್ ಹೀಗೆ ಪತ್ರಿಕೋದ್ಯಮದಲ್ಲಿ ಸಹಜವಾಗಿರುವ ಇಂಗ್ಲೀಷ್ ಪದಗಳ ಬಳಕೆ ಅವರ ಬರಹಗಳಲ್ಲಿ ಹೆಚ್ಚಾಗಿ ಕಾಣಬಹುದು. ಹೀಗೆ ಅನೇಕ ಅಂಶಗಳನ್ನು ಹಿರಿಯ ತಲೆಮಾರಿನ ಪರಂಪರೆಯನ್ನು ಉದಾಹರಿಸುವ ಮೂಲಕ ಅಥವಾ ವಾಸ್ತವ ಅಂಶಗಳಿಗೆ ಹೆಚ್ಚು ಒತ್ತು ಕೊಡುವ ಮೂಲಕ ನೇರವಾಗಿ ಅವರು ರಚಿಸುವುದನ್ನು ಕಾಣಬಹುದು.

ಜೋಗಿಯವರು 'ಜಾನಕಿ ಕಾಲಂ'ನಲ್ಲಿನ 'ದೂರದೊಂದು ತೀರದಿಂದ ತೇಲಿ ಪಾರಿಜಾತ ಗಂಧ' ಎಂಬ ಲೇಖನದಲ್ಲಿ ಹೊಸದಾಗಿ ಬರೆಯ ಹೊರಡುವ ಎಲ್ಲರಿಗೂ ಕಾಡುವ ಪ್ರಶ್ನೆಗಳನ್ನು ಎತ್ತುತ್ತಾರೆ ; "ನಾನೇನು ಓದಬೇಕು? ಯಾವ ಕೃತಿಯನ್ನು ಹೇಗೆ ಓದಬೇಕು? ಒಂದು ಕೃತಿ ಕೇವಲ ಖುಷಿ ಕೊಟ್ಟರೆ ಸಾಕೇ? ಸಾಹಿತ್ಯದಲ್ಲಿ ಅದಕ್ಕಿಂತ ಹೆಚ್ಚಿನದೇನನ್ನಾದರೂ ನಾವು ನಿರೀಕ್ಷಿಸಬೇಕೆ? ಯಾರು ಎಷ್ಟೇ ಬಡಕೊಂಡರೂ ಅಂತಿಮವಾಗಿ ಓದುಗ ಕೃತಿಯನ್ನು ಕೈಗೆತ್ತಿಕೊಳ್ಳುವುದು ತನ್ನ ಸಂತೋಷಕ್ಕಾಗಿ ತಾನೆ?"[೬] ಹೀಗೆ ಅನೇಕ ಪ್ರಶ್ನೆಗಳನ್ನು ಮಾಧ್ಯಮ ಕ್ಷೇತ್ರಕ್ಕೆ ಹೊಸದಾಗಿ ಪ್ರವೇಶಿಸುವ ಪತ್ರಕರ್ತರನ್ನೂ, ಬರಹಗಾರರನ್ನೂ ಕುರಿತು ಕೇಳುತ್ತಾರೆ. ಪ್ರಶ್ನೆಗಳನ್ನು ನಮ್ಮಲ್ಲೇ ಹಾಕಿಕೊಂಡು ನಮ್ಮಲ್ಲೇ ಬೆಳೆದ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಬೇಕೆಂಬುದನ್ನು ಮಾರ್ಗದರ್ಶನದ ನೆಲೆಯಲ್ಲಿ ಅವರು ಬರೆಯುತ್ತಾರೆ. ಅವರು ಹೇಳುವ ಕ್ರಮ ವಸ್ತುವಿಷಯದ ಮೇಲೆ ಅವಲಂಬಿತವಾಗಿರುತ್ತದೆ. ನಿಜವಾದ ಪತ್ರಕರ್ತನಾದವರು ಪ್ರಶ್ನೆಗಳನ್ನು ತಮ್ಮಲ್ಲೇ ಹಾಕಿಕೊಳ್ಳುವ ಮೂಲಕ ಬೆಳೆಯುವ ಸಾಧ್ಯವೆಂದು ಹೇಳುವ ಜೋಗಿಯವರ ಕ್ರಮ ನವೀನ ರೀತಿಯದಾಗಿದೆ.

ಜೋಗಿಯವರು 'ಮೊನ್ನೆ ಆಕಸ್ಮಿಕವಾಗಿ ಆಕಾಶ ಕಣ್ಣಿಗೆ ಬಿದ್ದು.....' ಎಂಬ ತಮ್ಮ ಲೇಖನದಲ್ಲಿ ಆಕಾಶ ಮತ್ತು ಕಾವ್ಯಕ್ಕಿರುವ ವಿಸ್ತಾರತೆಯನ್ನು ಹೀಗೆ ಅರ್ಥೈಸುವರು. 'ಆಕಾಶದಲ್ಲೇನಿದೆ

ವೈವಿಧ್ಯ ಎಂದು ಕೇಳಬೇಡಿ, ಆಕಾಶಕ್ಕೂ ಕ್ಷಣಕ್ಕೊಂದು ಬಣ್ಣ, ಸಂಜೆಗೆಂಪಿನ ಆಕಾಶ, ಶಿಶಿರದ ನೀಲಾಕಾಶ, ಆಷಾಢದ ಬರಿ ಆಕಾಶ, ಶ್ರಾವಣದ ಕಪ್ಪು ಮೋಡ, ಮುಂಗುರುಳ ಆಕಾಶ, ಬೆಳಗಿನ ಸ್ತಬ್ಧ ಆಕಾಶ, ಸಂಜೆಯ ಮುಗ್ಧ ಆಕಾಶ, ಮಧ್ಯಾಹ್ನದ ಕ್ರೂರ ಆಕಾಶ, ರಾತ್ರಿಯ ನಿಗೂಢ ಆಕಾಶ– ಹೀಗೆ ಆಕಾಶಕ್ಕೆ ಹಲವು ಮುಖಗಳು ಕಂಡವರಿಗಷ್ಟೇ ಕಂಡಿತು, ಆದರೆ ಎಲ್ಲರಿಗೂ ಉಂಟು ಕಾಣುವುದಕ್ಕೆ ಅವಕಾಶ"[೬] ಎಂದು ವಿವರಿಸುತ್ತಾರೆ. ಇಂದು ನಮ್ಮಿಂದ ಅವಗಾಹನೆಗೆ ಒಳಗಾಗಿರುವ ಆಕಾಶ ಹಿಂದೆ ಅನೇಕ ಕಡೆಗಳಲ್ಲಿ (ಉದಾ : ಮೇಘದೂತ) ಅಭಿವ್ಯಕ್ತಿಯ ಮಾಧ್ಯಮವಾಗಿ ಬಳಕೆಯಾಗಿದೆ. ಇತ್ತೀಚಿನ ಬರಹಗಾರರು ಪ್ರಕೃತಿಯೊಂದಿಗೆ ಒಡನಾಟ ಬೆಳಸಿ ಸಾಹಿತ್ಯವನ್ನು ಬೆಳಸಬೇಕು ಎಂದು ಸೂಚಿಸುತ್ತಾರೆ. ಹೀಗೆ ಕಾವ್ಯಾತ್ಮಕ ಸಾಲುಗಳ ಮೂಲಕ ಆಕಾಶವೆಂಬ ಜಗತ್ತನ್ನು ಪರಿಚಯಿಸಿರುವ ಅವರ ಕ್ರಮ ವಿಶಿಷ್ಟವಾಗಿದೆ.

### ೬.೪. ತಾರಿಣಿ ಶುಭದಾಯಿನಿ : ಅಭಿವ್ಯಕ್ತಿ ಕ್ರಮ

ತಾರಿಣಿಯವರು ಪ್ರತಿಭಾ ನಂದಕುಮಾರ್ ಮತ್ತು ಸವಿತಾ ನಾಗಭೂಷಣ ಅವರ ಕಾವ್ಯವನ್ನು ತುಲನೆ ಮಾಡುವ ಕ್ರಮ ವಿಶಿಷ್ಟವಾಗಿದೆ. ಒಬ್ಬರು ಪುರಾಣದ ಪಾತ್ರಗಳನ್ನು ಮಿಥ್‌ನ ಮೂಲಕ ಒಡೆದು ಪುನರ್ ಸೃಷ್ಟಿಕಾರ್ಯ ಮಾಡುವವರು ಮತ್ತು ಸ್ತ್ರೀವಾದದ ಉಗ್ರ ನೆಲೆಯಲ್ಲಿ ಕಾವ್ಯವನ್ನು ಕಟ್ಟಿದವರು. ಹೀಗೆ ಹೇಳುತ್ತಲೇ ತಮ್ಮದೇ ಆದ ಸರಳ ವಿಶ್ಲೇಷಣೆಯ ಮೂಲಕವೇ ಲೇಖಕರನ್ನು ತಾರಿಣಿಯವರು ಪರಿಚಯಿಸುವರು. ತಾರಿಣಿಯವರ ಬರವಣಿಗೆಯಲ್ಲಿ ಕಸ್ಟಮೈಸ್, ಕಮ್‌ಫರ್ಟ್ ಜೂನ್, ಸಿಂಡ್ರೋಂ, ಸ್ಪೇಸ್ ಇತ್ಯಾದಿ ಇಂಗ್ಲಿಷ್ ಪದಗಳ ಬಳಕೆ ಕಾಣುತ್ತದೆ. ಇಂಗ್ಲಿಷ್ ಪದಗಳನ್ನು ಕನ್ನಡ ವಾಕ್ಯಗಳಲ್ಲಿ ಬೆರೆಸುವ ಬಗ್ಗೆ ಅವರಲ್ಲಿ ಮಡಿವಂತಿಕೆ ಕಾಣುವುದಿಲ್ಲ.

ತಾರಿಣಿಯವರು ಹೊಸ ತಲೆಮಾರಿನ ಕವಿ ಮತ್ತು ವಿಮರ್ಶಕಿಯಾಗಿದ್ದು ತಮ್ಮ ಖಚಿತ ಅಭಿಪ್ರಾಯಗಳನ್ನು ಸೂಕ್ತ ಉದಾಹರಣೆಗಳಿಂದ ಹೇಳುತ್ತಾರೆ. ಅಗತ್ಯವಿದಲ್ಲಿ ಅವುಗಳ ಹಿಂದಿರುವ ವಿಮರ್ಶೆಯ ಮಾನದಂಡಗಳ ಸರಳ ನಿರೂಪಣೆಯನ್ನು ಮಾಡುತ್ತಾರೆ. ತಾರಿಣಿ ಅವರಲ್ಲಿ ವಿಮರ್ಶೆಯ ಪರಿಭಾಷೆಯ ಪದಗಳ ಬಳಕೆ ಕಡಿಮೆ ಇದೆ. ಬರೀ ಒಳನೋಟಗಳನ್ನು ನೆಚ್ಚಿ ಹೊರಡಲಾರದಷ್ಟು ಪ್ರೊಫೆಷನಲ್ ಹಿನ್ನೆಲೆ ಹಾಗೂ ತರಬೇತಿ ಅವರಿಗಿರುವುದರಿಂದ ಬಹುಶಃ ಇದು ಸಾಧ್ಯವಾಗಿದೆ. ಕಾವ್ಯ ನನ್ನ ಅಭಿವ್ಯಕ್ತಿಯ ರೂಪವಾದರೆ, ವಿಮರ್ಶೆ ಅದನ್ನು ಇನ್ನಷ್ಟು ಅರಿಯುವ ಪ್ರಯತ್ನ ಎಂದು ಭಾವಿಸಿರುವ ತಾರಿಣಿ, ಕೃತಿ ವಿಮರ್ಶೆ ಹಾಗೂ ಸೈದ್ಧಾಂತಿಕ ವಿಮರ್ಶೆ, ಸಂಸ್ಕೃತಿಯ ವಿಮರ್ಶೆಗಳಲ್ಲಿ ತಮ್ಮ ನೆಲೆಯನ್ನು ಗುರುತಿಸಿಕೊಂಡಿದ್ದಾರೆ.

ತಾರಿಣಿಯವರು ಆಂಗ್ಲ ಉಪನ್ಯಾಸಕಿಯಾಗಿರುವುದರಿಂದ ಅವರ ವಿಮರ್ಶಾ ಲೇಖನಗಳಲ್ಲಿ ಪಾಶ್ಚಿಮಾತ್ಯ ಲೇಖಕರನ್ನು ಕನ್ನಡ ಲೇಖಕಿಯರ ಕಾವ್ಯದ ಜತೆಗಿಟ್ಟು ಸಮೀಕರಿಸಿ ಹೇಳುವುದನ್ನು

ಕಾಣಬಹುದು. ಸಾಹಿತ್ಯದ ಪರಿಕಲ್ಪನೆ, ಪ್ರತಿಮೆಗಳು, ಉಲ್ಲೇಖಗಳು ಅಷ್ಟಾಗಿ ಲೇಖನಗಳಲ್ಲಿ ಅವರು ಬಳಸಿಕೊಳ್ಳುವುದಿಲ್ಲ. ಸ್ತ್ರೀವಾದದ ಬಗೆಗಿನ ನೆಲೆಗಳನ್ನು ಹೆಚ್ಚಾಗಿ ಕವಯತ್ರಿಯರನ್ನು ಉದಾಹರಿಸುವ ಮೂಲಕ ಅವರು ಅರ್ಥೈಸುವರು. ಕನ್ನಡ ಹಿರಿಯ ವಿಮರ್ಶಕರು ಹಾಗೂ ಕವಿಗಳ ಕೃತಿಗಳನ್ನು ತಾರಿಣಿಯವರು ತಮ್ಮ ವಿಮರ್ಶೆಯಲ್ಲಿ ಅಷ್ಟಾಗಿ ಬಳಸಿಕೊಂಡಿಲ್ಲ. ಹೊಸ ತಲೆಮಾರಿನ ಬರಹಗಾರರು, ಕಾವ್ಯ, ಕಾದಂಬರಿ, ಸ್ತ್ರೀ ಸಂವೇದನೆಗಳ ಇತ್ಯಾದಿಗಳ ಸುತ್ತವೇ ಅವರು ವಿಮರ್ಶೆ ಮಾಡಿರುವುದನ್ನು ಕಾಣಬಹುದಾಗಿದೆ.

ಸ್ತ್ರೀಯರ ಬರವಣಿಗೆ ಹಾಗೂ ಆಲೋಚನೆಯ ಕ್ರಮದ ಮೇಲೆ ಪುರುಷ ಸಮಾಜ ಹೇರಿರುವ ಚೌಕಟ್ಟನ್ನು, ಉದಾಹರಣೆಯ ಮೂಲಕ ತಿಳಿಸುವ ತಂತ್ರವನ್ನು ತಾರಿಣಿಯವರ ವಿಮರ್ಶೆಯಲ್ಲಿ ಕಾಣಬಹುದಾಗಿದೆ. ಸ್ತ್ರೀಸಾಹಿತ್ಯವನ್ನು ನೋಡುವಾಗ ಪೂರ್ವಗ್ರಹ ಪೀಡಿತರಾಗಿ ನೋಡುವ ಪುರುಷರ ಕ್ರಮವನ್ನು ಅವರು ವಿರೋಧಿಸುತ್ತಾರೆ. ಆದರೆ ಪುರುಷ ಸಮಾಜದ ನಿರೀಕ್ಷೆಗೆ ಅನುಗುಣವಾಗಿ ಈ ಮಾದರಿಗಳನ್ನು ರೂಢಿಸಿಕೊಂಡಿರುವುದನ್ನು ಪುರಾಣ ಪಾತ್ರಗಳ ಮೂಲಕ ಅವರು ವಿಶ್ಲೇಷಿಸುತ್ತಾರೆ. ಹಾದರ ಮಾಡಿದ್ದಕ್ಕಾಗಿ ಹುಳ ಬಿದ್ದು ಸಾಯುವ ಅಮೃತಮತಿ, 'ವಡ್ಡಾರಾಧನೆ' ರಾಣಿಯರು, 'ಸಂಸ್ಕಾರದ' ಚಂದ್ರಿ ಈ ರೀತಿಯ ಮಾದರಿಗಳ ಮೂಲಕ ಪುರುಷ ಸಮಾಜದ ಹುನ್ನಾರವನ್ನು ಅವರು ವಿವೇಚಿಸುತ್ತಾರೆ.

ತಾರಿಣಿಯವರು ತಮ್ಮ 'ಕನ್ನಡ ಸಾಹಿತ್ಯ : ಸ್ತ್ರೀ ಸಂವೇದನೆಯ ನೆಲೆಗಳು' ಎಂಬ ಲೇಖನದಲ್ಲಿ "ದೇಹದ ನಿರ್ಬಂಧಗಳು ಸಮಾಜದಲ್ಲಿ ವಿಧಿಸಲ್ಪಡುತ್ತವೆ. ಸಮಾಜವು ಪುರುಷ ಕೇಂದ್ರಿತವಾಗಿದ್ದು ಲೈಂಗಿಕತೆಯನ್ನು ನಿರ್ಧರಿಸುವುದು ಅದರ ಕೈಯಲ್ಲಿರುವುದರಿಂದ ಸ್ತ್ರೀಯರಿಗೆ ಸಹಜವಾದ ಕಾಮವನ್ನು ನಿರಾಕರಿಸುತ್ತವೆ. ಇದನ್ನು ಅನೇಕ ಬರಹಗಾರ್ತಿಯರು ಪ್ರತಿರೋಧದ ನೆಲೆಯಲ್ಲಿ ಗ್ರಹಿಸುತ್ತಾರೆ"[೪] ಎಂದು ಹೇಳುತ್ತಾರೆ. ಹೀಗೆ ತಾರಿಣಿಯವರು ಬರಹಗಾರ್ತಿಯರ ಪ್ರತಿಭಟನೆಯನ್ನು ರೂಪಕಗಳ ಮೂಲಕ ತಿಳಿಸುತ್ತಾರೆ. ನಮ್ಮ ಅನೇಕ ಕವಯತ್ರಿಯರಿಗೆ ಅಕ್ಕಮಹಾದೇವಿ ನಿರ್ವಸ್ತ್ರಳಾಗಿರುವುದು ಪ್ರತಿಭಟನೆಯ ಮತ್ತು ಸ್ವಾತಂತ್ರ್ಯದ ರೂಪಕವಾಗಿದೆ. ಹಾಗೆಯೇ ಅಮೃತಮತಿ ತನ್ನಿಚ್ಛೆಯಂತೆ ಕಾಮವನ್ನು ಪಡೆಯುವ ಸ್ವತಂತ್ರ ಮನೋಭಾವ ನಮ್ಮ ಹಲವಾರು ಬರಹಗಾರ್ತಿಯರಿಗೆ ರೂಪಕವಾಗಿದೆ ಎಂದು ಹೇಳುವ ತಾರಿಣಿಯವರು ಕೆಲವೊಂದು ಲೈಂಗಿಕ ವಿಚಾರಗಳನ್ನು ರೂಪಕದ ಮೂಲಕ ಅರ್ಥೈಸುವ ಕ್ರಮ ವಿಶಿಷ್ಟವಾಗಿದೆ. ಹಾಗೆಯೇ ತಾರಿಣಿಯವರ ವಿಮರ್ಶೆಯಲ್ಲಿ, ಜೆಂಡರ್ ಸೆನ್ಸಿಟಿವಿಟಿಯಿದೆ. ಆದರೆ ಸ್ವತಃ ಕವಿಯಾಗಿ ತನ್ನದೇ ಭಾಷೆ ಪಡೆದಿರುವ ತಾರಿಣಿ, ವಿಮರ್ಶೆಯಲ್ಲಿ ತನ್ನದೇ ಆದ ಈಡಿಯಂ ಒಂದನ್ನು ಪಡೆದಿಲ್ಲವೇನೋ ಅನಿಸುತ್ತದೆ. ಒಟ್ಟಾರೆ ಇವರ ವಿಮರ್ಶೆ ಸಾಂಸ್ಕೃತಿಕ ವಿಮರ್ಶೆಯಡೆಗೆ ಕಂಡುಬರುತ್ತದೆ ಎಂದು ರಹಮತ್ ತರೀಕೆರೆಯವರು ಹೇಳುತ್ತಾರೆ.

## ೬.೫. ಜಿ.ಬಿ.ಹರೀಶ್ : ಅಭಿವ್ಯಕ್ತಿ ಕ್ರಮ

ಹರೀಶ್ ಅವರ 'ಬೆಳಕಿನಾಟ' ಹೊಸಗನ್ನಡದ ನಿರ್ಲಕ್ಷಿತ ನೆಲೆಗಳನ್ನು ಹುಡುಕುವ ಒಂಬತ್ತು ಲೇಖನಗಳ ಸಂಗ್ರಹವಾಗಿದೆ. ಒಂದು ಲೇಖನವು ಕೆಂಪು ನಾರಾಯಣ ಮತ್ತು ಮುದ್ದಣ್ಣರ ನಡುವಿನ ಕಾಲದ ಸಾಂಸ್ಕೃತಿಕ ದ್ರವ್ಯವನ್ನು ತೆರೆದಿಟ್ಟರೆ, ಉಳಿದ ಎಂಟು ಲೇಖನಗಳು ಕನ್ನಡದ ಪ್ರಮುಖ ಸಾಂಸ್ಕೃತಿಕ ಧೋರಣೆಗೆ ಹೊಸತನ್ನು ಸೇರಿಸುವುದರೊಂದಿಗೆ ಸಾಹಿತ್ಯ ಕ್ಷೇತ್ರದ ದುರಂತಗಳತ್ತ ಹಾಗೂ ವಿದ್ವತ್ತಿನ ಉಡಾಫೆ ಧೋರಣೆಯ ವಿಮರ್ಶೆಯತ್ತ ಮುಖ ಮಾಡಿವೆ.

ಹರೀಶ್ ಅವರು ಕನ್ನಡ ಸಾಹಿತ್ಯದ ಸ್ಟ್ರಾಂಗ್ ರೀಡಿಂಗ್ ಮತ್ತು ಕಾನ್‌ಫ್ಲಿಕ್ಟ್ ರೀಡೀಂಗ್‌ನಿಂದ ಕಂಡುಕೊಂಡ ಭಾರತೀಯ ಸಂಸ್ಕೃತಿಯ ಮಹತ್ವದ ಹಿನ್ನೆಲೆಯ ಪರಿಕಲ್ಪನೆಗಳನ್ನು ತಮ್ಮ ವಿಮರ್ಶಾ ಲೇಖನಗಳಲ್ಲಿ ಅಭಿವ್ಯಕ್ತಿಸುತ್ತಾರೆ. ನಿರ್ಲಕ್ಷಿತ ಪರಿಕಲ್ಪನೆಗಳನ್ನು ತಮ್ಮ ವಿಮರ್ಶಾ ಕನ್ನಡ ಬರಹಗಾರರು, ಭಾರತೀಯ ಸಂಸ್ಕೃತಿಯಿಂದಲೇ ತಮ್ಮ ಬದುಕಿನ ಬೇರುಗಳನ್ನು ಗಟ್ಟಿಗೊಳಿಸಿಕೊಂಡ ಬರಹಗಾರರನ್ನೇ ಅವರ ಸಾಹಿತ್ಯ ಕೃಷಿಯನ್ನು ಸಂಕ್ಷಿಪ್ತವಾಗಿ ಪರಿಚಯಿಸುವ ಅವರ ಕಲೆಗಾರಿಕೆಯು ವಿಶಿಷ್ಟವಾದುದಾಗಿದೆ.

ವಸಾಹತುಶಾಹಿ ಆಳ್ವಿಕೆಯ ಆರಂಭದಲ್ಲಿದ್ದ ದೇವಚಂದ್ರನು ತನ್ನ 'ರಾಜಾವಳಿ ಕಥಾಸಾರ'ದ ಮೂಲಕ ವಸಾಹತುಶಾಹಿಯ ಧೋರಣೆಗಳನ್ನು ಹಾಗೂ ನಿರ್ಲಕ್ಷಿತ ಸಮುದಾಯಗಳ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸುತ್ತಾನೆ ಹರೀಶ್ ಅವರು ತಿಳಿಸಿದ್ದಾರೆ. ಕ್ರೈಸ್ತ ಧರ್ಮವನ್ನು ಕುರಿತು ನೇರವಾಗಿ ಹೇಳುವುದಕ್ಕಿಂತಲೂ ಸಂಕ್ಷಿಪ್ತವಾಗಿ ಹೇಳಿರುವ ದೇವಚಂದ್ರನ ತಂತ್ರಗಾರಿಕೆಯನ್ನು ಸರಳ ವಾಕ್ಯಗಳ ಮೂಲಕವೇ ಅವರು ವಿಶ್ಲೇಷಿಸುತ್ತಾರೆ.

"ಟಿಪ್ಪು ಸುಲ್ತಾನನ ಸಾವಿನ ನಂತರ ಮೈಸೂರಿನಲ್ಲಿ ಪಟ್ಟಣಕ್ಕೆ ಬಂದ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲವನ್ನು ವಿಮರ್ಶಕರು ಗದ್ಯ ಸಾಹಿತ್ಯದ ಸುವರ್ಣಯುಗ ಎಂದಿದ್ದಾರೆ. ಈ ಗದ್ಯ ಯುಗದಲ್ಲಿ ಅರಮನೆಯ ಆಶ್ರಯ ಪಡೆದವರಲ್ಲಿ ಸಾಹಿತ್ಯ ಚರಿತ್ರೆಕಾರರ ಕಣ್ಣಿಗೆ ಮುಖ್ಯವಾಗಿ ಬಿದ್ದವನೆಂದರೆ ಕೆಂಪು ನಾರಾಯಣ : ಬೀಳದೇ ಹೋದವನೆಂದರೆ ದೇವಚಂದ್ರ."[8]

ಹೀಗೆ ಹರೀಶ್‌ರವರು ಕೃತಿಯೊಳಗಿನ ಚರಿತ್ರೆಯ ಉಲ್ಲೇಖವನ್ನು ಬಳಸಿಕೊಂಡು ಚಾರಿತ್ರಿಕ ಹಿನ್ನೆಲೆಯಲ್ಲಿ ಹೇಳುತ್ತಾರೆ. ದೇವಚಂದ್ರನನ್ನು ಕುರಿತ ತಮ್ಮ ಲೇಖನದ ಉದ್ದಕ್ಕೂ ಬೇರೆ ಬೇರೆ ವಿಮರ್ಶಕರ ಹೇಳಿಕೆಗಳನ್ನು ಅಡಿಟಿಪ್ಪಣಿಗಳು ಪಾಶ್ಚಿಮಾತ್ಯ ವಿದ್ವಾಂಸರ ಹೆಸರುಗಳನ್ನು ಉಲ್ಲೇಖಿಸಿರುವುದು ಅವರ ವಿಸ್ತೃತ ಓದನ್ನು ಸೂಚಿಸುತ್ತದೆ.

ಹರೀಶ್ ಅವರು 'ವಸಾಹತುಶಾಹಿಯ ನೆರಳು-ಬೆಳಕಿನಾಟ : ದೇವಚಂದ್ರನ 'ರಾಜಾವಳಿ ಕಥಾಸಾರ' ಎಂಬ ಲೇಖನದಲ್ಲಿ '......ಷಣ್ಮತಂಗಳೊಳ್ ಜೈನ ಮತಮೆ ಸತ್ಯವೆಂದು ಸರ್ವರ್ ನಿಶ್ಚಯಂ ಮಾಡಿದರ್...... ಜೈನ ಮತ ಆದಿ ನಿರ್ದೋಷವಾದಂತಾದ್ದು.... ಜೇನಮತಮೇ ಆದಿಯೆಂದು ತನ್ನ ದೇಶಂಗಳ್ಗೆ ಪರವಾನೆ ಬರೆಸಿ.....'[೧೦] ಹೀಗೆ ಮೊದಲಾಗಿ ಕೃತಿಯುದ್ದಕ್ಕೂ ಮೂಲಕೃತಿಯ ವಾಕ್ಯಗಳನ್ನು ತಮ್ಮ ವಿಮರ್ಶೆಯಲ್ಲಿ ಬಳಸಿಕೊಂಡು ಸಮಕಾಲೀನ ತುಮುಲಗಳು ಮತ್ತು ಸಾಂಸ್ಕೃತಿಕ ಸಂದರ್ಭವನ್ನು ಅವರು ವ್ಯಕ್ತಪಡಿಸಿರುವ ಕ್ರಮ ವಿಶಿಷ್ಟವಾಗಿದೆ. ಒಂದು ಕೃತಿಯ ಮೂಲಕ ಅಲ್ಲಿನ ವಸಾಹತುಶಾಹಿ ಸಮಾಜ, ಆಡಳಿತ ಕ್ರಮ, ಜನೋಪಯೋಗಿ ಕಾರ್ಯ, ಹೊಸ ಧರ್ಮದ ಉದಯಕ್ಕೆ ಸ್ಪಂದನೆ- ಹೀಗೆ ಭಿನ್ನ ನೆಲೆಗಳಲ್ಲಿ ಕೃತಿ ಬಿಚ್ಚಿಕೊಂಡಿರುವುದನ್ನು ಅವರು ಬೇರೆ ಬೇರೆ ಉಲ್ಲೇಖಗಳ ಮೂಲಕ ತಿಳಿಸುತ್ತಾರೆ.

ಕನ್ನಡದ ಪಂಥಗಳಾದ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಹಾಗೂ ಪಾಶ್ಚಿಮಾತ್ಯ ಕವಿ, ಕೃತಿಗಳನ್ನು ಕೃತಿಯುದ್ದಕ್ಕೂ ಪ್ರಸ್ತಾಪ ಮಾಡುವಿಕೆಯು ಅವರ ಅಧ್ಯಯನ ಕ್ರಮದ ವ್ಯಾಪಕತೆಯನ್ನು ಪರಿಚಯಿಸುತ್ತದೆ. ಕಾರಂತ, ಡಿ.ವಿ.ಜಿ, ಬೇಂದ್ರೆ, ಲಂಕೇಶ್, ಅನಂತಮೂರ್ತಿ, ವಿವೇಕಾನಂದ, ಅರವಿಂದರು, ಶಂಕರ ಮೊಕಾಶಿ ಪುಣೇಕರ್, ಕೀಟ್ಸ್, ಶೆಲ್ಲಿ, ಫ್ಲೀಟ್, ವರ್ಡ್ಸ್‌ವರ್ತ್ ಮುಂತಾದವರ ವ್ಯಕ್ತಿಗಳ ಚಿಂತನೆಗಳ ಮೂಲಕ ಸಾಹಿತ್ಯ ವಿಶ್ಲೇಷಿಸುವ ಅವರ ಕಥನ ಕ್ರಮವು ವಿಶಿಷ್ಟವಾಗಿದೆ.

### ೬.೬. ಕವಿತಾ ರೈ : ಅಭಿವ್ಯಕ್ತಿ ಕ್ರಮ

ಜಾಗತೀಕರಣದ ಸಂದರ್ಭದಲ್ಲಿ ಅನೇಕ ಕ್ಷೇತ್ರಗಳಲ್ಲಿ ಬದಲಾವಣೆ ಆಗುವುರದರೊಂದಿಗೆ ಮಹಿಳೆಯರೂ ಬದಲಾಗುತ್ತಿದ್ದಾರೆ. ರಾಜಕೀಯ, ಆರ್ಥಿಕ ಮುಂತಾದ ಕ್ಷೇತ್ರಗಳಲ್ಲಿ ಅಸ್ತಿತ್ವಕ್ಕಾಗಿ ಸೆಣಸಾಟ ನಡೆಸುತ್ತಾರೆ ಎಂದು ಹೇಳುವ ಮೂಲಕ ಕವಿತಾ ರೈ ತಮ್ಮ ವಿಮರ್ಶಾ ಕೃತಿ 'ಅರಿವಿನ ನಡೆ'ಯಲ್ಲಿ ಮಹಿಳೆಯರನ್ನು ಅನೇಕ ನೆಲೆಗಳಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡುತ್ತಾರೆ. ಫ್ಯಾಕ್ಟರಿ, ಐಸ್‌ಕ್ರೀಮ್, ಕ್ಲಾಸಿಕಲ್, ಲೇಬರ್, ಮಾರ್ಕೇಟಿಂಗ್ ಮುಂತಾದ ಇಂಗ್ಲೀಷ್ ಪದಗಳ ಬಳಕೆಯನ್ನು ಕೃತಿಯಲ್ಲಿ ಮಾಡುತ್ತಾರೆ. ಪಾಶ್ಚಾತ್ಯ ಮಹಿಳಾ ಲೇಖಕಿಯರು, ಕಾದಂಬರಿಗಳನ್ನು ಉದಾಹರಣೆಯನ್ನು (ಗಾಯತ್ರಿ ಸ್ಪಿವಾಕ್, ಸೂಸನ್ ಬಕಿನ್) ಮಾಡಿರುವುದು ಅವರಲ್ಲಿ ವಿಸ್ತೃತ ಪಾಶ್ಚಾತ್ಯ ಶಿಕ್ಷಣದ ಜ್ಞಾನವಿರುವುದರ ಸಂಕೇತವಾಗಿದೆ.

"ಭಾರತೀಯ ಸಂಸ್ಕೃತಿಯಲ್ಲಿ ಶೋಡಷ ಸಂಸ್ಕಾರಗಳಲ್ಲಿ ವಿವಾಹ ಸಂಸ್ಕಾರಕ್ಕೆ ಅಗ್ರಸ್ಥಾನ ಲಭಿಸಿದೆ. ಆಶ್ರಮಗಳಲ್ಲಿ ಸರ್ವಶ್ರೇಷ್ಠ ಎಂಬ ಪ್ರಶಂಸೆಗೂ ಋಷಿಗಳಿಂದ ಧನ್ಯೋ ಗೃಹಸ್ಥಾಶ್ರಮ"[೧೧] ಎಂದು ಹೇಳುವ ಕವಿತಾ ರೈಯವರು ಆ ಮೂಲಕ ಮಹಿಳಾ ನೆಲೆಗಳಲ್ಲಿ ಸ್ತ್ರೀ ಅಸ್ತಿತ್ವವನ್ನು

ಹುಡುಕುತ್ತಾರೆ. ಹೀಗೆ ಅವರ ಅಭಿವ್ಯಕ್ತಿಯ ಕ್ರಮ ಇತರೆ ವಿಮರ್ಶಕರಿಗಿಂತ ಭಿನ್ನವಾಗಿದೆ. ಮರಾಣದ ಅಂಶಗಳು, ಸಂಸ್ಕೃತ ಶ್ಲೋಕಗಳು, ಲೇಖಕರ ಅಭಿಪ್ರಾಯಗಳು, ಕಾದಂಬರಿಯಲ್ಲಿನ ಉಲ್ಲೇಖಗಳು ಹೀಗೆ ಅನೇಕ ಅಂಶಗಳನ್ನು ಬೆರೆಸುತ್ತಾ ಕವಿತಾ ರೈ ಅವರು ಚರ್ಚೆ ಬೆಳೆಸುತ್ತಾರೆ.

ಪಾಶ್ಚಾತ್ಯ ಮತ್ತು ಇಂಗ್ಲೀಷ್ ಬರಹಗಾರರು ಜಾಗತೀಕರಣ, ಶಿಕ್ಷಣ ಮಹಿಳೆಯರ ಜೀವನ ಕುರಿತು ಬರೆದಿರುವ ಕಾದಂಬರಿಗಳಿಂದ ಮತ್ತು ಅಭಿಪ್ರಾಯಗಳನ್ನು ತಮ್ಮ ಬಹುತೇಕ ವಿಮರ್ಶಾ ಲೇಖನಗಳಲ್ಲಿ ಕವಿತಾ ಅವರು ಬಳಸಿಕೊಳ್ಳುತ್ತಾರೆ. ಇದು ಇಂಗ್ಲೀಷ್ ಸಾಹಿತ್ಯದ ಕಡೆ ಅವರಿಗಿರುವ ಒಲವನ್ನು ತಿಳಿಸುತ್ತದೆ. ಇಂಗ್ಲೀಷ್‌ನ ಹೆಚ್ಚು ಉಲ್ಲೇಖಗಳನ್ನು ತಮ್ಮ ವಿಮರ್ಶೆಯಲ್ಲಿ ಬಳಸಿಕೊಳ್ಳುವ ಚರ್ಚಿಸುವ ಪ್ರವೃತ್ತಿಯನ್ನು ಅವರು ಪ್ರದರ್ಶಿಸುತ್ತಾರೆ. ಈ ರೀತಿ ಬಹಳಷ್ಟು ಇಂಗ್ಲೀಷ್ ಬರವಣಿಗೆಯನ್ನು ಬಳಸಿಕೊಂಡಿರುವುದ ಅವರ ಭಾಷಾಪ್ರೌಢಿಮೆಗೆ ಸಾಕ್ಷಿಯಾದರೂ ಓದುಗರು ಅರ್ಥೈಸಿಕೊಳ್ಳುವಾಗ ಸಮಸ್ಯೆಯಾಗಬಹುದೆಂದು ಅನಿಸುತ್ತದೆ. ಇವರ ಹೆಚ್ಚು ಲೇಖನಗಳು ಸಾಹಿತ್ಯ ನೆಲೆಗಿಂತಲೂ ಸಾಮಾಜಿಕ ನೆಲೆಯಲ್ಲಿಯೇ ವಿಸ್ತಾರವನ್ನು ವಸಾಹತುಶಾಹಿ, ಮರಾಣ, ಮೂಢನಂಬಿಕೆ, ಅನಿಷ್ಟ ಪದ್ಧತಿಗಳನ್ನು ಬರವಣಿಗೆಯ ಮೂಲಕ ಅವರು ಪ್ರಶ್ನೆ ಮಾಡುವ ಗುಣ ಅವರ ಬರಹದಲ್ಲಿದೆ.

ಪ್ರತಿಮೆಗಳ ಮೂಲಕ ಹೆಣ್ಣು ಮತ್ತು ಸಮಾಜದ ನಡುವೆ ಕಾವ್ಯಾತ್ಮಕ ಸಮನ್ವಯವನ್ನು ಕಟ್ಟಿಕೊಡುವ ವಿಶ್ಲೇಷಿಸುವ ಕವಿತಾ ಅವರ ಅಭಿವ್ಯಕ್ತಿ ಕ್ರಮವು ಅಪೂರ್ವವಾಗಿದೆ. 'ಅರಿವಿನ ನಡೆ' ವಿಮರ್ಶಾ ಕೃತಿಯಲ್ಲಿ ಕವಿತಾ ರೈರವರು ಅನೇಕ ವಿಮರ್ಶಾ ಪಾರಿಭಾಷಿಕ ಪದಗಳನ್ನು ಬಳಸುತ್ತಾರೆ. ಅಭಿವ್ಯಕ್ತಿ, ಉಮ್ಮತ, ಐನ್‌ಮನ್, ಮರಾಣ, ಸಂದಿಗ್ಧತೆ, ಪ್ರತಿಮೆ, ಸಂಕಥನ ಮುಂತಾದ ಪಾರಿಭಾಷಿಕ ಪದಗಳನ್ನು ಬಳಸಿಕೊಂಡು ಅವರು ಸಾಹಿತ್ಯವನ್ನು ಚರ್ಚೆ ಮಾಡುತ್ತಾರೆ.

ಕಾವ್ಯದಲ್ಲಿ ಕಾಣುವ ಬದುಕಿನ ವಿಶ್ಲೇಷಣೆ ಕವಿತಾರ ವಿಮರ್ಶೆಯ ಬರಹಗಳಲ್ಲೂ ತಾಕಲಾಡಿದೆ. ಹಲವು ವರ್ಷಗಳ ಓದು, ಚಿಂತನೆಗಳ ಫಲವಾಗಿ ರೂಪುಗೊಂಡ 'ಮಹಿಳೆ : ಅಸ್ತಿತ್ವದ ಸಂಕಥನ' (ಕನ್ನಡದ ಮಹಿಳಾ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ಪರಿಕಲ್ಪನೆ) ಅವರ ಸಂಶೋಧನೆ ಪ್ರಬಂಧವಾಗಿದೆ. ಅನ್ಯ ಶಿಸ್ತುಗಳ ಜೊತೆಯಲ್ಲಿ ಸಾಹಿತ್ಯ ಕೃತಿಗಳನ್ನು ಪರಿಶೀಲಿಸಿರುವ ಇಲ್ಲಿನ ಪರಿ ಮನನೀಯ. 'ಅರಿವಿನ ನಡೆ' ವಿಮರ್ಶಾ ಕೃತಿಯಲ್ಲಿ ಜಾಗತೀಕರಣದಿಂದ ಸಾಂಸ್ಕೃತಿಕ ನಡವಳಿಗಳ ವಿಶ್ಲೇಷಣೆ ಇದೆ. ಸಾಹಿತ್ಯ ವಿಮರ್ಶೆಯನ್ನು ಇತರ ಜ್ಞಾನ ಶಿಸ್ತುಗಳ ಜೊತೆಯಲ್ಲಿಯೇ ಅವಲೋಕಿಸುವ ಕವಿತಾರ ನೋಟ ಇಲ್ಲಿಯೂ ಮುಂದುವರೆದಿದೆ. ಲೋಕರೂಢಿಯ ಸಂಸ್ಕೃತಿ ಮತ್ತು ಅದರಿಂದಾಚೆಗೆ ಇರುವ ಬದುಕುಗಳ ಬಗೆಗೆ ಕಾಳಜಿ ಇರುವ ಕವಿತಾ ಕೊಡಗಿನ ಜಗತ್ತು ಹೇಗೆ ನಮ್ಮ ಪ್ರಧಾನ ಧಾರೆಗಿಂತ ಭಿನ್ನವಾಗಿ ಜನಮಾನಸವನ್ನು ಹಿಡಿದಿಟ್ಟಿದೆ ಎಂಬುದನ್ನು ಇಲ್ಲಿ ವಿಶ್ಲೇಷಿಸುತ್ತಾರೆ.

## ೬.೭. ಹೊಸ ತಲೆಮಾರಿನ ವಿಮರ್ಶಕರ ತೌಲನಿಕ ವಿಶ್ಲೇಷಣೆ

* ತಾರಿಣಿಯವರು ಭಾವಪ್ರಧಾನವೂ ಸಂಶ್ಲೇಷಣಾ ಪ್ರಧಾನವೂ ಆದ ಕಾವ್ಯ ಹಾಗೂ ತಾರ್ಕಿಕವೂ, ವೈಚಾರಿಕವೂ, ವಿಶ್ಲೇಷಣ ಪ್ರಧಾನವೂ ಆದ ವಿಮರ್ಶೆ. ಹೀಗೆ ಎರಡರಲ್ಲೂ ತಮ್ಮನ್ನು ಏಕಕಾಲದಲ್ಲಿ ತೊಡಗಿಸಿಕೊಂಡಿದ್ದಾರೆ. ಕಾವ್ಯಕ್ಕೆ ಹೋಲಿಸಿದರೆ ಅವರು ವಿಮರ್ಶಕಿಯಾಗಿಯೇ ತಮ್ಮ ಶಕ್ತಿಯನ್ನು ಹೆಚ್ಚು ಪ್ರಕಟಿಸುತ್ತಿದ್ದಾರೆ. ಈ ಹೊತ್ತಿನ ವಿಮರ್ಶೆ ಪ್ರಕಾರ ಎದುರಿಸುತ್ತಿರುವ ಕ್ರೈಸಿಸ್ಸೂ ಹೀಗೆ ಅನಿಸಲು ಕಾರಣವಿರಬಹುದೆಂದು ರಹಮತ್ ತರೀಕೆರೆಯವರು ಅಭಿಪ್ರಾಯಪಟ್ಟಿದ್ದಾರೆ. ವಿಮರ್ಶೆಯಲ್ಲಿ ತಾರಿಣಿಯವರು ಹೆಚ್ಚು ಓಟ್‌ಸ್ಪೋಕನ್ ಆಗುತ್ತಾರೆ. ಇದು ವಿಮರ್ಶೆಯ ಪ್ರಕಾರದಲ್ಲೇ ಇರುವ ಒತ್ತಾಸೆ ಕೂಡ. ಇದರಿಂದ ಅವರಿಗೆ ಲೇಖಕರ ಲೋಕದೃಷ್ಟಿಯ ಮೇಲೆ, ಮೌಲ್ಯದ ನೆಲೆಯಿಂದ ಪ್ರಶ್ನೆಯನ್ನು ಎತ್ತುವ, ಕೃತಿಯನ್ನು ಮುಖಾಮುಖಿ ಮಾಡುವ ಅಭಿವ್ಯಕ್ತಿಯ ಕ್ರಮ ಇತರರಿಗಿಂತ ಭಿನ್ನವಾಗಿದೆ.

* ಕವಿತಾರವರು ಸ್ತ್ರೀವಾದಿ ನೆಲೆಯಲ್ಲಿ ವಿಮರ್ಶೆಯನ್ನು ಮಾಡುತ್ತಲೇ ಕೃತಿಗಳಲ್ಲಿನ ಪುರುಷ ಮತ್ತು ಸ್ತ್ರೀಯರ ನಡುವಿನ ಲಿಂಗ ತಾರತಮ್ಯದ ವೈರುಧ್ಯಗಳನ್ನು ಮುಖಾಮುಖ ಮಾಡುತ್ತಾರೆ. ಪುರಾಣಗಳಲ್ಲಿನ, ಸಂಸ್ಕೃತ ಶ್ಲೋಕಗಳಲ್ಲಿನ ಸ್ತ್ರೀ ವಿರೋಧಿಯ ನೆಲೆಗಳನ್ನು ಹಾಗೂ ಪುರುಷರು ಸ್ತ್ರೀಯನ್ನು ಜೀತದಂತೆ ನೋಡುವ ಕ್ರಮವನ್ನು ಪುರಾಣದ ಕಥೆಗಳ ಮೂಲಕ ಪ್ರಸ್ತಾಪಿಸುವ ಅವರ ಅಭಿವ್ಯಕ್ತಿಯ ಕ್ರಮ ವಿಶಿಷ್ಟವಾಗಿದೆ. ಇಂಗ್ಲೀಷ್ ಕಾದಂಬರಿಗಳು, ಪಾಶ್ಚಾತ್ಯ ವಿದ್ವಾಂಸರ ಸಾಹಿತ್ಯ ಉಲ್ಲೇಖಗಳನ್ನು ಅತೀ ಹೆಚ್ಚಾಗಿ ಅವರು ಬಳಸಿಕೊಳ್ಳುತ್ತಾರೆ. ಲೋಕರೂಢಿಯ ಸಂಸ್ಕೃತಿ ಮತ್ತು ಅದರಿಂದಾಚೆಗೆ ಇರುವ ಬದುಕುಗಳ ಬಗೆಗೆ ಕಾಳಜಿ ಇರುವ ಕವಿತಾ ಕೊಡಗಿನ ಜಗತ್ತು ಹೇಗೆ ನಮ್ಮ ಪ್ರಧಾನ ಧಾರೆಗಿಂತ ಭಿನ್ನವಾಗಿದೆ ಎಂದು ಕೊಡಗಿನ ಪಾರಿಭಾಷಿಕ ಪದಗಳ ಮೂಲಕ ಅವರು ತಿಳಿಸುತ್ತಾರೆ.

* ವಿಕ್ರಮ ವಿಸಾಜಿ ವಿಮರ್ಶೆಯಲ್ಲಿ ಆತ್ಮೀಯವಾಗುವುದು ರೂಪಕದ ಭಾಷೆಯ ಬಳಕೆಯಿಂದ ಪ್ರಾಚೀನ ಸಾಹಿತ್ಯ ಕುರಿತು ಕುರ್ತಕೋಟಿಯವರ ವಿಮರ್ಶೆ, ಇದೇ ಕುರ್ತಕೋಟಿಯವರ ಬಗ್ಗೆ ಅವರು ಹೀಗೆ ಬರೆಯುತ್ತಾರೆ. "ಕುರ್ತಕೋಟಿಯವರು ಆದಿಪುರಾಣದ ಪುರುದೇವನಂತೆ. ಪ್ರಾಚೀನ ಮಹಾಕಾವ್ಯಗಳ ಓದು ಅವರಿಗೆ ನೀಳಾಂಜನೆಯ ನೃತ್ಯದಂತೆ ಎಂಬಂತಹ ಸಾಲುಗಳನ್ನು ಗಮನಿಸಬಹುದಾಗಿದೆ. ಅವರ ಬರವಣಿಗೆಯ ಉದ್ದಕ್ಕೂ ನನಗೆ ಕಾಣುವುದು ಪಡ್ಡೆ ಹುಡುಗನ ಉತ್ಸಾಹ ಮತ್ತು ಮಾಗಿದ ನಾಟಿ ವೈದ್ಯನಿಗೆ ತನ್ನ ಕೆಲಸದ ಬಗ್ಗೆ ಇರುವ ಗಾಢನಂಬಿಕೆ ಶ್ರದ್ಧೆ, ವಿಸಾಜಿಯವರ ಬರಹದಲ್ಲಿ ವಿನಯ ಮತ್ತು ನಿಷ್ಠತೆಗಳ ಒಂದು ಅಪೂರ್ವ ಹದವಿದೆ.

* ಹೊಸ ತಲೆಮಾರಿನ ವಿಮರ್ಶಕರಾದ ತಾರಿಣಿಯವರದು ಸ್ತ್ರೀವಾದಿ ಎನ್ನಬಹುದಾದ ವಿಮರ್ಶೆಯಲ್ಲ. ಅವರಲ್ಲಿ ಜೆಂಡರ್ ಸೆನ್ಸಿಟೆನಿಟಿಯಿದೆ. ಕಾವ್ಯವು ಅಭಿವ್ಯಕ್ತಿಯ ರೂಪವಾದರೆ, ವಿಮರ್ಶೆ ಅದನ್ನು ಇನ್ನಷ್ಟು ಅರಿಯುವ ಪ್ರಯತ್ನ ಎಂದು ಭಾವಿಸುವ ಅವರು ಕೃತಿ ವಿಮರ್ಶೆ, ಸೈದ್ಧಾಂತಿಕ ವಿಮರ್ಶೆ, ಸಂಸ್ಕೃತಿ ವಿಮರ್ಶೆ, ಹೀಗೆ ಹಲವು ಕವಲುಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಕವಿ, ವಿಮರ್ಶಕಿ ಕಥೆಗಾರ್ತಿಯಾಗಿ ದಶಕದಿಂದೀಚೆಗೆ ಕವಿತಾ ರೈ ಗಮನ ಸೆಳೆಯುವರು. ಜಾಗತೀಕರಣವನ್ನು ಅವರು ಪ್ರಸ್ತಾಪ ಮಾಡುತ್ತಲೆ ಸ್ತ್ರೀಯ ಅಸ್ಮಿತೆಯೊಂದಿಗೆ ಸಾಂಸ್ಕೃತಿಕ ನಡಾವಳಿಗಳ ವಿಶ್ಲೇಷಣೆ ಮಾಡಿರುವ ಅವರೆ ವಿಶ್ಲೇಷಣೆ ಮಾಡಿರುವ ಅವರು ವಿಶಿಷ್ಟ ವಿಮರ್ಶಕಿಯಾಗಿದ್ದಾರೆ.

* ಕನ್ನಡದ ಕವಿ ಲೇಖನೊಬ್ಬನನ್ನು ಅದೇ ಗುಣದ ಇನ್ನೊಬ್ಬ ಲೇಖಕನೊಂದಿಗೆ ಗುರುತಿಸುವ ಜೋಗಿ ಮತ್ತು ಹರೀಶ್‌ರವರ ಕ್ರಮವು ವಿಭಿನ್ನವಾಗಿದೆ. ಪಾಶ್ಚಿಮಾತ್ಯ ಲೇಖಕರೊಂದಿಗೆ ಕನ್ನಡದ ಲೇಖಕನೊಬ್ಬನನ್ನು ಅಥವಾ ಭಾರತೀಯ ಲೇಖಕನೊಬ್ಬನನ್ನು ಗುರುತಿಸಿ ಬೆಲೆಕಟ್ಟುವ ಈರ್ವರ ಕ್ರಮವೂ ಇತರೆ ವಿಮರ್ಶಕರಿಗಿಂತ ಭಿನ್ನವಾಗಿದೆ. ಪುಟ್ಟಯ್ಯನವರು ದಲಿತ ನೆಲೆಯ ಲೇಖಕರನ್ನು ಮುಖ್ಯವಾಗಿ ಚರ್ಚಿಸುತ್ತಾರೆ. ಆದರೆ ಕುವೆಂಪುರವರ ಸಾಹಿತ್ಯದ ಕುರಿತು ದಲಿತ ನೆಲೆಯಲ್ಲಿ ನೋಡುತ್ತಾರೆ. ಆದರೆ ವಿಸಾಜಿಯವರು ಪಾಶ್ಚಾತ್ಯ ಲೇಖಕರ ತುಲನೆಗೆ ಹೋಗದೆ ಕನ್ನಡ ಮತ್ತು ಭಾರತೀಯ ಲೇಖಕರಲ್ಲೇ ತಮ್ಮ ಅಸ್ತಿತ್ವವನ್ನು ಪ್ರಾದೇಶಿಕ ನೆಲೆಯಲ್ಲಿ ಗುರುತಿಸಿಕೊಳ್ಳುವರು.

**ಟಿಪ್ಪಣಿಗಳು:**

೧. ವಿಕ್ರಮ ವಿಸಾಜಿ, ಬೆಳಗಿನ ಮುಖ, ಪು.೧೧

೨. ಅದೇ, ಪು.೬-೭.

೩. ಬಿ.ಎಂ. ಪುಟ್ಟಯ್ಯ, ಕದಡು, ಪು.೨

೪. ಅದೇ, ಪು.೨೪

೫. ಜೋಗಿ, ಜಾನಕಿ ಕಾಲಂ, ಪು.೫೪.

೬. ಅದೇ, ಪು.೭೭

೭. ಅದೇ, ಪು.೧೦೦.

೮. ತಾರಿಣಿ ಶುಭದಾಯಿನಿ, ಹೆಡೆಯಂತಾಡುವ ಸೊಡರು, ಪು.೧೧೫.

೯. ಜಿ.ಬಿ. ಹರೀಶ್, ಬೆಳಕಿನಾಟ, ಪು.೧೩

೧೦. ಅದೇ, ಪು.೧೯

೧೧. ಕವಿತಾ ರೈ, ಅರಿವಿನ ನಡೆ, ಪು.೧೪.

# ಅಧ್ಯಾಯ ೭

# ಉಪಸಂಹಾರ

## ಅಧ್ಯಯನದ ಮುಖ್ಯ ಫಲಿತಗಳು

'ಹೊಸ ತಲೆಮಾರಿನ ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳು' ಸಂಪ್ರಬಂಧದ ಅಧ್ಯಯನದಲ್ಲಿ ಕೆಲವು ಮುಖ್ಯ ಫಲಿತಗಳನ್ನು ಕಂಡುಕೊಳ್ಳಲಾಗಿದ್ದು ಅವು ಇಂತಿವೆ.

೧. ನಮ್ಮ ಹೊಸ ತಲೆಮಾರಿನ ಹೆಚ್ಚು ವಿಮರ್ಶಕರು ಧಾರ್ಮಿಕ ವಿಚಾರಗಳಾದ ಮೂಲಭೂತವಾದ ಅಥವಾ ಕೋಮುವಾದಗಳ ಪರವಾಗಿರುವುದಿಲ್ಲ. ಅವರ ವಿಮರ್ಶೆಯಲ್ಲಿ ಮನುಷ್ಯತ್ವ ಒಂದು ಮೌಲ್ಯವಾಗಿ ಹೊರಹೊಮ್ಮುವುದನ್ನು ಕಾಣಬಹುದು. ಈ ವಿಮರ್ಶಕರು ಧರ್ಮದ ವಿಷಯದಲ್ಲಿ ಉದಾರವಾದಿಗಳಾಗಿದ್ದಾರೆ. ಒಂದು ಬಗೆಯ ಮಾನವತಾವಾದಿ, ವಿಚಾರವಾದಿ ಹಾಗೂ ಸಾಂಸ್ಕೃತಿಕ ನೆಲೆಯ ನೋಟಗಳು ಅವರಲ್ಲಿವೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೨. ಸಾಹಿತ್ಯ ವಿಮರ್ಶೆಯ ತಾತ್ವಿಕ ನೆಲೆಗಳ ವಿಷಯದಲ್ಲಿ ಹೊಸ ತಲೆಮಾರಿನ ವಿಮರ್ಶಕರು ಭಿನ್ನವಾಗಿ ಆಲೋಚಿಸುತ್ತಾರೆ. ಪರಂಪರೆ, ಲೋಕದೃಷ್ಟಿ, ಸಾಹಿತ್ಯ, ವಿಮರ್ಶಕರ ಅಭಿವ್ಯಕ್ತಿ ಕ್ರಮ ಹೀಗೆ ಪ್ರತಿಯೊಂದು ಕಲ್ಪನೆಯನ್ನು ವಿಮರ್ಶಕರು ಭಿನ್ನಭಿನ್ನವಾಗಿ ಆಲೋಚನೆ ಮಾಡಿರುವುದನ್ನು ಕಾಣಬಹುದು. ಈ ಪರಿಕಲ್ಪನೆಗಳ ನೆಲೆಯಲ್ಲಿ ಪ್ರತಿಯೊಬ್ಬ ವಿಮರ್ಶಕರು ತಮ್ಮದೇ ಆದ ಬದ್ಧತೆ ಪ್ರಕಟಿಸಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೩. ಹೊಸ ತಲೆಮಾರಿನ ವಿಮರ್ಶಕರಲ್ಲಿ ಕೆಲವು ವಿಮರ್ಶಕರು, ವಿಮರ್ಶಾ ಕೃತಿಯ ಪ್ರಮುಖ ಲೇಖನಗಳಲ್ಲಿ ಕೇವಲ ಸ್ತ್ರೀವಾದಿ ವಿಮರ್ಶೆಗೆ ಮಾತ್ರ ಸೀಮಿತವಾಗುವುದಿಲ್ಲ. ಅವರು ಬೇರೆ ಬೇರೆ ದೃಷ್ಟಿಕೋನಗಳಲ್ಲಿ ಕೃತಿಯನ್ನು ವಿಶ್ಲೇಷಿಸುತ್ತಾರೆ. ವಿಕ್ರಮ ವಿಸಾಜಿಯವರು ಹೊಸ ತಲೆಮಾರಿನ ಮಹಿಳಾ ಬರಹಗಾರರನ್ನು ಹೆಸರಿಸುತ್ತಾರೆ, ಆದರೆ ಅವರ ಸ್ತ್ರೀ ಸಂವೇದನೆಗಳ ಕುರಿತು ಹೆಚ್ಚು ಮಾತನಾಡುವುದಿಲ್ಲ. ಹರೀಶ, ಪುಟ್ಟಯ್ಯ, ಜೋಗಿಯವರಿಗೆ ಸಹ ಮಹಿಳಾ ಸಂವೇದನೆಯನ್ನು ಕುರಿತು ಮಾತನಾಡುವುದು ಮುಖ್ಯವಾಗಿ ಕಂಡಿಲ್ಲ. ಆದರೆ ವಿಕ್ರಮ ವಿಸಾಜಿಯವರು ಕಂಬಾರರ ನಾಟಕ, ಕಾವ್ಯ  ಪ್ರಸ್ತಾಪ ಮಾಡುತ್ತಾ ಮಹಿಳೆಯರ ಕುರಿತು

ಚರ್ಚಿಸುತ್ತಾರೆ. ಹೊಸ ತಲೆಮಾರಿನ ಸಾಹಿತ್ಯ ವಿಮರ್ಶಕರಲ್ಲಿ ಮಹಿಳೆಯರ ಬರವಣಿಗೆ ಕ್ರಮವು ಇತರೆ ವಿಮರ್ಶಕರಿಗಿಂತ ಭಿನ್ನವಾಗಿದೆ. ತಾರಿಣಿ ಶುಭದಾಯಿನಿ ಮತ್ತು ಕವಿತಾ ರೈ ಅವರು ಸ್ತ್ರೀವಾದಿ ನೆಲೆಯಲ್ಲಿ ಸಮಾಜವನ್ನು ಹಾಗೂ ಸ್ತ್ರೀಯರ ಬದುಕನ್ನು ತಮ್ಮ ವಿಮರ್ಶೆಯಲ್ಲಿ ಕಟ್ಟಿಕೊಡುತ್ತಾರೆ. ಆದರೂ ತಾರಿಣಿಯವರು ತಮ್ಮ ಪ್ರಮುಖ ಲೇಖನಗಳಲ್ಲಿ ಕೇವಲ ಸ್ತ್ರೀವಾದಿ ವಿಮರ್ಶೆಗೆ ಮಾತ್ರ ಸೀಮಿತವಾಗುವುದಿಲ್ಲ. ಇತರೆ ಸಂವೇದನೆ ಹಾಗೂ ದೃಷ್ಟಿಕೋನಗಳಲ್ಲಿ ಕೂಡ ಕೃತಿಯನ್ನು ವಿಶ್ಲೇಷಿಸುತ್ತಾರೆ. ಕವಿತಾ ರೈ ಅವರು ತಾರಿಣಿಯವರಿಗಿಂತ ಕೊಂಚ ಭಿನ್ನ ಧೋರಣೆಯನ್ನು ಹೊಂದಿದ್ದಾರೆ. ಜಾಗತೀಕರಣದ ನೆಲೆಯಲ್ಲಿ ಮಹಿಳೆ ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಿರುವ ನೆಲೆಗಳನ್ನು ಪುರಾಣಕಾಲದ ವ್ಯವಸ್ಥೆಯ ಮೂಲಕ ಮುಖಾಮುಖಿ ಮಾಡುವ ತಂತ್ರಗಾರಿಕೆಯನ್ನು ಅವರ ಬರವಣಿಗೆಯಲ್ಲಿ ಗುರುತಿಸಬಹುದಾಗಿದೆ. ಈ ಮೇಲಿನ ಆರು ಜನ ವಿಮರ್ಶಕರಲ್ಲಿ ಹೆಚ್ಚಾಗಿ ಸ್ತ್ರೀಪರ ಕಾಳಜಿ ಮೂಡಿಬಂದಿರುವುದು ಕವಿತಾ ರೈ ಅವರಲ್ಲಿ.

೪. ಹೊಸ ತಲೆಮಾರಿನ ವಿಮರ್ಶಕರು ಪ್ರಾದೇಶಿಕತೆಯ ಕುರಿತು ತಮ್ಮದೇ ಆದ ದೃಷ್ಟಿಕೋನಗಳನ್ನು ಹೊಂದಿದ್ದಾರೆ. ಬೀದರ್ ಜಿಲ್ಲೆಯವರಾದ ವಿಕ್ರಮ ವಿಸಾಜಿಯವರು ಹೈದ್ರಾಬಾದ್ ಕರ್ನಾಟಕದಿಂದ ಬಂದವರು ಈ ಕಾರಣಕ್ಕಾಗಿ ಕನ್ನಡ ಸಾಹಿತ್ಯದಷ್ಟೇ ಹೈದ್ರಬಾದ್ ಭಾಗದ ಪ್ರಾದೇಶಿಕ ಸಾಹಿತ್ಯವು ಅವರಿಗೆ ಮುಖ್ಯವಾಗುತ್ತದೆ. ಉಳಿದಂತೆ ಹರೀಶ, ಜೋಗಿ, ಪುಟ್ಟಯ್ಯ ಹಾಗೂ ತಾರಿಣಿಯವರಿಗೆ ಪ್ರಾದೇಶಿಕತೆಯ ಪ್ರಶ್ನೆ ಅಷ್ಟು ಮುಖ್ಯವಾಗಿ ಕಾಣುವುದಿಲ್ಲ. ಕವಿತಾ ರೈ ಅವರಿಗೆ ಅವರು ಹುಟ್ಟಿಬೆಳೆದ ಕೊಡಗು ಪ್ರಾಂತ್ಯದ ವಿಶಿಷ್ಟ ಪ್ರಾದೇಶಿಕತೆಯನ್ನು ತಿಳಿಸುವುದು ಮುಖ್ಯವಾಗುತ್ತದೆ. ಹಾಗಾಗಿಯೇ ಪ್ರಾದೇಶಿಕ ನೆಲೆಯಲ್ಲಿ ವಿಸಾಜಿ ಮತ್ತು ಕವಿತಾ ರೈ ಅವರು ತಮ್ಮ ವಿಮರ್ಶೆಯಲ್ಲಿ ಹೆಚ್ಚು ಹೆಚ್ಚು ಚರ್ಚೆ ನಡೆಸುತ್ತಾರೆ. ಬೆಂಗಳೂರು ಭಾಗದಲ್ಲಿ ವಾಸಿಸುವ ಬರಹಗಾರರಾದ ಜೋಗಿ ಹಾಗೂ ಹರೀಶ್ ಅವರಿಗೆ ಪ್ರಾದೇಶಿಕತೆ ಅಷ್ಟು ಮುಖ್ಯವಾದ ಸಂಗತಿಯಾಗಿ ಕಾಣುವುದಿಲ್ಲ. ವರ್ಗದ ನೆಲೆಯಿಂದ ಚಿಂತನೆ ಮಾಡುವ ಬಿ.ಎಂ.ಪುಟ್ಟಯ್ಯ ಅವರಿಗೂ ಇದು ಮುಖ್ಯವಾಗುವುದಿಲ್ಲ. ಬಹುಶಃ ಹಿಂದುಳಿದ ಪ್ರದೇಶಗಳಿಂದ ಬರುವ ಲೇಖಕರಿಗೆ ಒಟ್ಟು ಕನ್ನಡ ಸಾಹಿತ್ಯ ಮುಖ್ಯವಾಗಿರುವಷ್ಟೇ ಹಿಂದುಳಿದ ಪ್ರದೇಶದ ಸಾಹಿತ್ಯವೂ ಮುಖ್ಯವಾಗಿರುತ್ತದೆ. ಕವಿತಾ ರೈ ಅವರು ಕೊಡಗು, ತುಳು, ಸಂಸ್ಕೃತಿಗಳ ಹಿನ್ನೆಲೆಯಿಂದ ಬಂದವರು. ಹೀಗಾಗಿ ಕರ್ನಾಟಕದ ಒಟ್ಟು ಸಂಸ್ಕೃತಿಯ ಹಿನ್ನೆಲೆಯಲ್ಲಿದ್ದರೂ ವಿಶಿಷ್ಟವಾಗಿ ತುಳು ಕೊಡವ ಎಂಬ ಪ್ರಾದೇಶಿಕ ಸಂಸ್ಕೃತಿಗಳ ನೆಲೆಯಲ್ಲಿ ಅವರು ಚರ್ಚೆಮಾಡುತ್ತಾರೆ.

೫. ಹೊಸ ತಲೆಮಾರಿನ ವಿಮರ್ಶಕರಲ್ಲಿ ದಲಿತ ಸಾಹಿತ್ಯ ಎಷ್ಟು ಮುಖ್ಯವಾಗುತ್ತದೋ ಅಷ್ಟೇ ಸಮಾಜವೂ ಮುಖ್ಯವಾಗುತ್ತದೆ. ವಿಸಾಜಿಯವರು ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಹಿಂದುಳಿದ ಪ್ರದೇಶದಿಂದ ಬಂದಿರುವುದರಿಂದ ಆ ಭಾಗದ ಸಾಹಿತ್ಯವನ್ನು ಚರ್ಚಿಸುವುದು ಅವರಿಗೆ ಒಂದು ಸಾಮಾಜಿಕ ಕ್ರಿಯೆ ಕೂಡ ಆಗಿದೆ. ಪುಟ್ಟಯ್ಯರವರು ಆರ್ಥಿಕವಾಗಿ ಹಿಂದುಳಿದ ಹಾಗೂ ದಲಿತ ವರ್ಗದಿಂದ ಬಂದಿರುವುದರಿಂದ ಅವರಿಗೆ ಕನ್ನಡದ ಒಟ್ಟು ಸಾಹಿತ್ಯದಷ್ಟೇ ದಲಿತ ವರ್ಗದವರ ನೋವುಗಳ ಮೂಲಕ ಸಾಹಿತ್ಯವನ್ನು ನೋಡುವುದು ಮುಖ್ಯವಾಗುತ್ತದೆ. ಬಿ.ಎಂ.ಪುಟ್ಟಯ್ಯ ಬಿಟ್ಟರೆ ಇತರೆ ವಿಮರ್ಶಕರಲ್ಲಿ ದಲಿತ ಸಂವೇದನೆ ಅಷ್ಟಾಗಿ ಕಾಣಿಸುವುದಿಲ್ಲ. ಎಡಪಂಥಿಯ ಧೋರಣೆಯಿಂದ ಕೂಡಿರುವ ಪುಟ್ಟಯ್ಯರವರ ವಿಮರ್ಶೆಯು ಈ ಎಲ್ಲರಲ್ಲಿ ವಿಶಿಷ್ಟತೆಯಿಂದ ಕೂಡಿದೆ.

೬. ಹೊಸ ತಲೆಮಾರಿನ ವಿಮರ್ಶಕರಲ್ಲಿ ಪರಂಪರೆಯೊಂದಿಗೆ ಹೆಚ್ಚು ಸಂಘರ್ಷ ಮಾಡದೆ ಅದರ ಮುಖ್ಯ ಅಂಶಗಳನ್ನು ಒಪ್ಪಿಕೊಂಡು ನಡೆಯುವ ಧೋರಣೆಯು ವ್ಯಕ್ತವಾಗಿದೆ. ವಿಸಾಜಿಯವರು ಹಿರಿಯ ಬರಹಗಾರರಿಗಿಂತ ಇತ್ತೀಚಿನ ಯುವ ಬರಹಗಾರರ ಕುರಿತು ಹೆಚ್ಚು ಚರ್ಚೆ ಮಾಡುತ್ತಾ ಪರಂಪರೆಯ ಮಹತ್ವವನ್ನು ಅವರಿಗೆ ಮನಗಾಣಿಸಿ ಕೊಡುವ ಯತ್ನ ಮಾಡುತ್ತಾರೆ. ಆದರೆ ಜೋಗಿಯವರು ಹಿರಿಯ ಬರಹಗಾರರ ಪ್ರಸ್ತಾಪ ಮಾಡುತ್ತಲೇ ಕಿರಿಯ ಬರಹಗಾರರ ನಡುವೆ ಕೊಂಡಿಯನ್ನು ಬೆಸೆಯುವ ಪ್ರಯತ್ನ ಮಾಡುತ್ತಾರೆ. ವಿಮರ್ಶಕಿಯರಾದ ತಾರಿಣಿ ಮತ್ತು ಕವಿತಾ ರೈ ಅವರು ಹಿರಿಯ ಲೇಖಕಿಯರ ಚರ್ಚೆ ಮಾಡುತ್ತಲೇ ಕಿರಿಯ ಲೇಖಕಿಯರನ್ನು ಸಂಘಟಿಸುವ ಪ್ರಯತ್ನ ಮಾಡುತ್ತಾರೆ. ಹರೀಶರವರು ಪ್ರಾಚೀನ ಹಿರಿಯ ಲೇಖಕರನ್ನು ಹಾಗೂ ಅವರ ಕೃತಿಗಳನ್ನು ಮುಖ್ಯಧಾರೆಯಲ್ಲಿಟ್ಟು ಚರ್ಚೆ ಮಾಡುತ್ತಾ ಅವರಲ್ಲಿರುವ ಭಾರತೀಯ ಸಂಸ್ಕೃತಿಯ ಅಂಗಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಆದರೆ ಪುಟ್ಟಯ್ಯರವರಲ್ಲಿ ದಲಿತ ನೆಲೆಯಲ್ಲಿ ಒಂದು ಚಿಂತನಾ ಪರಂಪರೆಯನ್ನು ಕಟ್ಟುವ ಗುಣವು ಎದ್ದು ಗೋಚರಿಸುತ್ತದೆ. ಹೀಗೆ ಹೊಸ ತಲೆಮಾರಿನ ವಿಮರ್ಶಕರು ಪ್ರಾಚೀನ ಪರಂಪರೆಯೊಂದಿಗೆ ಬೇರೆಬೇರೆ ಬಗೆಯಲ್ಲಿ ಒಡನಾಟ ಮಾಡುತ್ತಾರೆ ಎಂಬುದನ್ನು ಪ್ರಸ್ತುತ ಸಂಪ್ರಬಂಧದಲ್ಲಿ ಕಂಡುಕೊಳ್ಳಲಾಗಿದೆ.

೭. ಹೊಸ ತಲೆಮಾರಿನ ವಿಮರ್ಶಕರಲ್ಲಿ ವಿಮರ್ಶೆಗೆ ಬೇಕಾದ ಸಿದ್ಧತೆ ಕುರಿತಂತೆ ಬೇರೆಬೇರೆ ಬಗೆಯ ನೆಲೆಗಳಿವೆ. ಕೆಲವು ವಿಮರ್ಶಕರು ಹೆಚ್ಚಾಗಿ ಸಾಹಿತ್ಯವನ್ನು ಓದಿಕೊಂಡಿರುವುದರಿಂದ ಅವರಲ್ಲಿ ಪಾಶ್ಚಾತ್ಯ ಕವಿಗಳು, ಭಾರತೀಯ ಕವಿಗಳು ಹಾಗೂ ಕನ್ನಡ ಕವಿಗಳ ಜೊತೆ ಅನುಸಂಧಾನವಿದೆ. ಅವರ ಕೃತಿ, ಪ್ರತಿಮೆ, ಉಲ್ಲೇಖಗಳನ್ನು ತಮ್ಮ ವಿಮರ್ಶೆಯಲ್ಲಿ ಅವರು

ಹೆಚ್ಚಾಗಿ ಬಳಸಿಕೊಂಡಿದ್ದಾರೆ. ಇನ್ನೂ ಕೆಲವು ವಿಮರ್ಶಕರಲ್ಲಿ ಅಧ್ಯಯನದ ಹಿನ್ನೆಲೆ ಅಷ್ಟೊಂದು ಆಳವಾಗಿ ಇರದೆ ಇರುವುದರಿಂದ ಅವರ ಚಿಂತನೆಗಳು ಸರಿಯಾಗಿ ಮೂಡಿ ಬಂದಿಲ್ಲದಿರುವುದನ್ನು ಗಮನಿಸಬಹುದಾಗಿದೆ. ಇವರಲ್ಲಿ ಕೆಲವರು ಕಡಿಮೆ ಪಾಂಡಿತ್ಯವನ್ನು ಹೊಂದಿದ್ದರೂ ಹೆಚ್ಚು ಅರ್ಥವತ್ತಾಗಿ ಬರೆಯುವವರೂ ಇದ್ದಾರೆ. ಪ್ರಾಚೀನ ಸಾಹಿತ್ಯ ಕೃತಿಯ ಬಗ್ಗೆ ಕೆಲವರಲ್ಲಿ ಹೆಚ್ಚು ಕಾಳಜಿ ವ್ಯಕ್ತವಾದರೆ ಹಾಗೂ ಹೊಸ ತಲೆಮಾರಿನ ಬರಹಗಾರರ ಬಗ್ಗೆ ಕೆಲವರಲ್ಲಿ ಕಾಳಜಿ ವ್ಯಕ್ತವಾಗುತ್ತದೆ.

೮. ಹೊಸ ತಲೆಮಾರಿನ ಕೆಲವು ವಿಮರ್ಶಕರಲ್ಲಿ ವಿಮರ್ಶೆಯ ಭಾಷೆಯು ಚೆನ್ನಾಗಿ ಮೂಡಿ ಬಂದಿದೆ. ಆದರೆ ಕೆಲವು ವಿಮರ್ಶಕರಲ್ಲಿ ವಿಮರ್ಶೆಯ ಭಾಷೆಯು ಇನ್ನೂ ರೂಪುಗೊಳ್ಳುವ ಪ್ರಕ್ರಿಯೆಯಲ್ಲಿದೆ. ಕ್ಲಿಷ್ಟವಾಗಿ ಬರೆಯುವ ವಿಮರ್ಶಕರಿಗೆ ಹೋಲಿಸಿದರೆ ಸರಳವಾಗಿ ಬರೆಯುವ ವಿಮರ್ಶಕರ ಭಾಷೆಯು ಹೆಚ್ಚು ಆಪ್ತವಾಗುವುದನ್ನು ಗಮನಿಸಬಹುದಾಗಿದೆ.

೯. ಸಾಹಿತ್ಯ ಕೃತಿಯ ಚರ್ಚೆಯ ನೆಪದಲ್ಲಿ ಸಮಾಜವನ್ನು ಚರ್ಚಿಸುವ ಪ್ರವೃತ್ತಿಯನ್ನು ಹೊಸ ತಲೆಮಾರಿನ ವಿಮರ್ಶಕರಲ್ಲಿ ಕಾಣಬಹುದಾಗಿದೆ. ಮುಖ್ಯವಾಗಿ ಪುಟ್ಟಯ್ಯ ಹಾಗೂ ಕವಿತಾ ರೈ ಅವರಲ್ಲಿ ಸಾಹಿತ್ಯ ಕೃತಿಯ ಚರ್ಚೆ ಮಾಡುತ್ತಲೇ ಸಮಾಜದೊಳಗಿನ ವ್ಯವಸ್ಥೆಯನ್ನು ಕುರಿತು ಪ್ರಸ್ತಾಪ ಮಾಡುವುದನ್ನು ನೋಡಬಹುದು. ಇನ್ನೂ ಕೆಲವು ವಿಮರ್ಶಕರು ಸಾಹಿತ್ಯ ಕೃತಿಯನ್ನು ಮುಖ್ಯವಾಗಿಟ್ಟುಕೊಂಡು ಅದರ ಸಾಹಿತ್ಯಿಕ ಚೌಕಟ್ಟಿನಲ್ಲೇ ಕೃತಿಯನ್ನು ವಿಮರ್ಶೆ ಮಾಡುತ್ತಾರೆ. ಸಾಮಾಜಿಕ ಚಿಂತನೆಗೆ ದಾಟುವುದಿಲ್ಲ.

೧೦. ಹೊಸ ತಲೆಮಾರಿನ ವಿಮರ್ಶಕರಲ್ಲಿ ಪರಂಪರೆಯ ಜೊತೆಗೆ ಆರಾಧನೆಯ ಭಾವವನ್ನೂ ಅಥವಾ ನಿರಾಕರಣೆಯ ಭಾವವನ್ನೂ ಇಟ್ಟುಕೊಳ್ಳದೇ ಪರಂಪರೆಯ ಜೊತೆಗೆ ಒಂದು ರೀತಿಯ ವಿಮರ್ಶಾತ್ಮಕ ಅನುಸಂಧಾನದ ಧೋರಣೆ ಇಟ್ಟುಕೊಂಡಿರುವುದು ಕಾಣುತ್ತದೆ. ಕೆಲವು ವಿಮರ್ಶಕರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯ ಪರಂಪರೆ ಮತ್ತು ಹೊಸಗನ್ನಡ ಸಾಹಿತ್ಯ ಪರಂಪರೆಯ ಜೊತೆಗೆ ವಿಮರ್ಶಾತ್ಮಕ ಅನುಸಂಧಾನವಿದೆ. ಮತ್ತೆ ಕೆಲವು ವಿಮರ್ಶಕರು ತಮ್ಮ ನೆಚ್ಚಿನ ಬರಹಗಾರರನ್ನು ಇಟ್ಟುಕೊಂಡು ಚರ್ಚಿಸುವಾಗ ಅವರಲ್ಲಿ ತಾತ್ವಿಕ ಜಗಳವಿರುವುದಿಲ್ಲ. ಇಷ್ಟವಿಲ್ಲದ ಬರಹಗಾರರನ್ನು ಆಯ್ಕೆ ಮಾಡಿಕೊಂಡು ಚರ್ಚಿಸುವಾಗ ಮಾತ್ರ ಲೇಖಕರ ಅಥವಾ ಕೃತಿಯ ಜತೆ ಜಗಳ ಕಂಡುಬರುತ್ತದೆ. ಹೀಗೆ ಹೊಸತಲೆಮಾರಿನ ವಿಮರ್ಶಕರಲ್ಲಿ ಒಟ್ಟು ಪರಂಪರೆಯ ಬಗ್ಗೆ ಚರ್ಚಿಸುವಾಗ ಒಂದು ನಿಲುವು, ನಿರ್ದಿಷ್ಟ ಲೇಖಕರ ಬಗ್ಗೆ ಚರ್ಚಿಸುವಾಗ ಇನ್ನೊಂದು ನಿಲುವು ಹೀಗೆ– ಎರಡು ಬಗೆಯ ವಿಮರ್ಶೆಯ ವಿಧಾನಗಳು ಕಂಡುಬರುತ್ತವೆ.

೧೧. ಹೊಸ ತಲೆಮಾರಿನ ವಿಮರ್ಶಕರ ಲೋಕದೃಷ್ಟಿಯ ಕುರಿತು ಭಿನ್ನವಾದ ಕಾಳಜಿಗಳು ವ್ಯಕ್ತವಾಗಿವೆ. ದಲಿತ ವರ್ಗದ ಕಾಳಜಿಯು ಪುಟ್ಟಯ್ಯನವರಲ್ಲಿಯೂ ಮಹಿಳಾವಾದದ ಕಾಳಜಿಯು ತಾರಿಣಿ ಮತ್ತು ಕವಿತಾರಲ್ಲಿಯೂ ಹಿಂದುಳಿದ ಪ್ರದೇಶದ ಸಾಹಿತ್ಯದ ಕುರಿತ ಕಾಳಜಿ ವಿಕ್ರಮ ವಿಸಾಜಿಯವರಲ್ಲಿಯೂ ವ್ಯಕ್ತವಾಗಿದೆ. ಜೋಗಿಯವರಲ್ಲಿ ಮರೆಯಾದ ಹಿರಿಯ ಲೇಖಕರ ಬಗ್ಗೆ ಒಲವು ವ್ಯಕ್ತವಾದರೆ ಸಾಮಾಜಿಕ ಸಾಹಿತ್ಯದ ಚರ್ಚೆಯಲ್ಲಿ ಹರೀಶರವರಿಗೆ ಆಸಕ್ತಿ ಕಂಡು ಬರದೆ, ಪ್ರಾಚೀನ ಸಾಹಿತ್ಯ ಪರಂಪರೆಯ ಕುರಿತು ಕಾಳಜಿ ವ್ಯಕ್ತವಾಗುತ್ತದೆ. ಹೀಗೆ ಪ್ರತಿಯೊಬ್ಬ ವಿಮರ್ಶಕರು ಭಿನ್ನ ನಿಲುವುಗಳೊಂದಿಗೆ ಸಾಹಿತ್ಯ ಮತ್ತು ನಿಲುವುಗಳೊಂದಿಗೆ ಸಮಾಜವನ್ನು ಅರ್ಥೈಸುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೧೨. ಸಾಹಿತ್ಯ ಪರಿಕಲ್ಪನೆಯಲ್ಲಿ ಹೊಸ ತಲೆಮಾರಿನ ವಿಮರ್ಶಕರು ಅತ್ಯುತ್ತಮ ಲೇಖಕರನ್ನು ಆಯ್ಕೆ ಮಾಡಿಕೊಂಡು ಚರ್ಚೆ ಮಾಡುತ್ತಲೇ ಅವರೊಂದಿಗೆ ಮುಖಾಮುಖಿಯಾಗುತ್ತಾರೆ. ಇವರಿಗೆ ಪಂಥಗಳು ಮುಖ್ಯವಾಗದೆ, ಲೇಖಕರ ಆಯ್ಕೆ ಧೋರಣೆಗಳು ಮುಖ್ಯವಾಗುತ್ತವೆ.

೧೩. ಹೊಸ ತಲೆವಾರಿನ ವಿಮರ್ಶಕರಲ್ಲಿ ಜೋಗಿಯವರು ಕಥೆಗಾರ ಹಾಗೂ ಪತ್ರಕರ್ತರಾಗಿರುವುದರಿಂದ ವಿಮರ್ಶೆಯನ್ನು ಸರಳವಾದ ಭಾಷೆಯಲ್ಲಿ ಕಥಾನಾತ್ಮಕವಾಗಿ ಬರೆಯುತ್ತಾರೆ. ತಾರಿಣಿ, ಕವಿತಾ, ವಿಸಾಜಿಯವರು ಕವಿ, ಕಥೆ, ವಿಮರ್ಶಕರಾಗಿರುವುದರಿಂದ ಅವರಲ್ಲಿ ಸೈದ್ಧಾಂತಿಕ ನೆಲೆಯ ಕಾವ್ಯಾತ್ಮಕ ವಿಚಾರಗಳು ವ್ಯಕ್ತವಾಗಿವೆ. ಹೆಚ್ಚಿನ ವಿಮರ್ಶಕರು ಅಧ್ಯಾಪಕರಾಗಿದ್ದು ಅಕಾಡೆಮಿಕ್ ಪರಿಸರದಲ್ಲಿ ಕೆಲಸ ಮಾಡುವುದರಿಂದ ಅವರಲ್ಲಿ ಒಂದು ಬಗೆಯ ಪ್ರೌಢಭಾಷಾ ಬಳಕೆ ಮತ್ತು ನಿರೂಪಣಾ ವಿಧಾನ ಕಾಣಬಹುದು.

**ಹೆಚ್ಚಿನ ಅಧ್ಯಯನದ ಸಾಧ್ಯತೆಗಳು**

೧. ಹೊಸ ತಲೆಮಾರಿನ ವಿಮರ್ಶಕರು ಸಂಖ್ಯೆಯಲ್ಲಿ ಹೆಚ್ಚಾಗಿ ಇರುವುದರಿಂದ ಇವರ ಕೃತಿಗಳನ್ನು ಇಟ್ಟುಕೊಂಡು ಯಾವುದಾದರೂ ಪರಿಕಲ್ಪನೆಯ ಮೂಲಕ ಅವರ ಬರಹವನ್ನು ಚರ್ಚಿಸಬಹುದಾಗಿದೆ. ಉದಾಹರಣೆಗೆ ಸ್ತ್ರೀ ಸಂವೇದನೆ, ದಲಿತ ಸಂವೇದನೆಯೆಂಬ ಪರಿಕಲ್ಪನೆಯ ನೆಲೆಯಲ್ಲಿ ಹೊಸ ವಿಮರ್ಶಕರು ಹೇಗೆ ವಿಮರ್ಶೆ ಮಾಡುತ್ತಾರೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ.

೨. ಈ ಪ್ರಬಂಧದಲ್ಲಿ ಚರ್ಚಿಸಿದ ಆರು ಜನ ವಿಮರ್ಶಕರಲ್ಲಿ ಇನ್ನೂ ಹಲವು ಜನ ವಿಮರ್ಶಕರನ್ನು ಇಟ್ಟುಕೊಂಡು ಚರ್ಚಿಸುವ ಸಾಧ್ಯತೆಯಿದೆ. ಇವರ ಪ್ರಕಟಿತ ಕೃತಿ, ಲೇಖನ ಅಪ್ರಕಟಿತ ಕೃತಿಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಬಹುದಾಗಿದೆ. ಆಗ

ಪ್ರಾತಿನಿಧಿಕ ವಿಮರ್ಶಕರ ಬದಲು ಇಡೀ ಹೊಸ ತಲೆಮಾರಿನ ವಿಮರ್ಶಕರ ನಿಲುವುಗಳನ್ನು ಸಮಗ್ರವಾಗಿ ನೋಡುವುದು ಸಾಧ್ಯವಾಗುತ್ತದೆ.

೩. ಹೈದ್ರಾಬಾದ್ ಕರ್ನಾಟಕ, ದಕ್ಷಿಣ ಕನ್ನಡ, ಉತ್ತರ ಮತ್ತು ಮಧ್ಯ ಕರ್ನಾಟಕ ಭಾಗದಲ್ಲಿ ಬರುವ ವಿಮರ್ಶಕರನ್ನು ವಿಂಗಡಿಸಿಕೊಂಡು ವಿಮರ್ಶೆಯಲ್ಲಿ ಹೇಗೆ ಪ್ರಾದೇಶಿಕ ಆಶೋತ್ತರಗಳು ಕೆಲಸ ಮಾಡಿವೆ ಎಂಬುದನ್ನು ನೋಡಬಹುದಾಗಿದೆ.

೪. ಕನ್ನಡದ ಹಿರಿಯ ವಿಮರ್ಶಕರಾದ ಸಿ.ಎನ್.ರಾಮಚಂದ್ರನ್, ಜಿ.ಎಸ್.ಶಿವರುದ್ರಪ್ಪ, ಜಿ.ಎಚ್.ನಾಯಕ, ಜಿ.ಎಸ್.ಆಮೂರ ಮುಂತಾದವರ ಜೊತೆ, ಕನ್ನಡದ ಹೊಸ ತಲೆಮಾರಿನ ವಿಮರ್ಶಕರನ್ನು ಜೊತೆಯಾಗಿಟ್ಟುಕೊಂಡು ತೌಲನಿಕ ಅಧ್ಯಯನ ಮಾಡಬಹುದಾಗಿದೆ.

೫. ಹಿರಿಯ ವಿಮರ್ಶಕಿಯರಾದ ವಿಜಯಾದಬ್ಬೆ, ಸುಮಿತ್ರಾಬಾಯಿ ಮುಂತಾದವರ ಜೊತೆ ಹೊಸ ತಲೆಮಾರಿನ ವಿಮರ್ಶಕಿಯರನ್ನು ಇಟ್ಟು ಬೇರೆಬೇರೆ ಪರಿಕಲ್ಪನೆಗಳ ನೆಲೆಯಲ್ಲಿ ತೌಲನಿಕ ಅಧ್ಯಯನ ಮಾಡಬಹುದಾಗಿದೆ.

೬. ಹೊಸ ತಲೆಮಾರಿನ ವಿಮರ್ಶಕರು ಹಿರಿಯ ಕವಿಗಳ ಬಗ್ಗೆ (ಕುವೆಂಪು, ಬೇಂದ್ರೆ, ಚಂದ್ರಶೇಖರ ಕಂಬಾರ) ಅಥವಾ ಜಾಗತೀಕರಣದಂತಹ ನಿರ್ದಿಷ್ಟ ವಿಷಯಕ್ಕೆ ಹೇಗೆ ಪ್ರತಿಕ್ರಿಯೆ ಮಾಡಿದ್ದಾರೆ ಎಂಬುದನ್ನು ಅಧ್ಯಯನ ಮಾಡಬಹುದಾಗಿದೆ.

೭. ಹೊಸ ತಲೆಮಾರಿನ ಅನೇಕ ವಿಮರ್ಶಕರು ಕಾವ್ಯ, ಕಥೆ, ವಿಮರ್ಶೆಗಳನ್ನು ಬರೆದಿದ್ದಾರೆ, ಅವರ ಕಾವ್ಯ, ಕಥೆ, ವಿಮರ್ಶೆಯಲ್ಲಿ ವ್ಯಕ್ತವಾದ ಚಿಂತನೆಗಳು ಅವರ ವಿಮರ್ಶೆಯಲ್ಲಿ ಹೇಗೆ ಬಳಕೆಯಾಗಿದೆ ಎಂಬುದನ್ನು ನೋಡುತ್ತಾ, ಹೊಸ ತಲೆಮಾರಿನ ವಿಮರ್ಶಕರ ಒಟ್ಟು ಸಾಹಿತ್ಯದ ಬಗ್ಗೆ ಅಧ್ಯಯನ ಕೈಗೊಳ್ಳಬಹುದಾಗಿದೆ.

೮. ಹೊಸ ತಲೆಮಾರಿನ ವಿಮರ್ಶಕರನ್ನೆಲ್ಲಾ ಮುಖ್ಯವಾಗಿಟ್ಟುಕೊಂಡು ಅವರ ಪ್ರಮುಖ ವಿಮರ್ಶಾ ಲೇಖನಗಳನ್ನು ಅಧ್ಯಯನಕ್ಕೆ ಒಳಪಡಿಸಿ ಅವುಗಳ ಮೌಲ್ಯ ನಿರ್ಣಯ ಮಾಡಬಹುದಾಗಿದೆ.

ಆಧುನಿಕ ಕನ್ನಡ ವಿಮರ್ಶೆಯ ಪ್ರಕಾರಕ್ಕೆ ಒಂದು ಶತಮಾನ ಮುಗಿದಿದೆ. ಅದು ಬಿ.ಎಂ.ಶ್ರೀ., ಮಾಸ್ತಿ ಮುಂತಾದವರಿಂದ ಆರಂಭಗೊಂಡು ಈಗಿನ ಜೋಗಿ ಹಾಗೂ ತಾರಿಣಿಯವರ ತನಕ ಬೆಳೆದುನಿಂತಿದೆ. ಕನ್ನಡ ಸಾಹಿತ್ಯ ವಿಮರ್ಶೆಯನ್ನು ಒಂದು ಶತಮಾನದ ಕಾಲ ಬೇರೆ ಬೇರೆ ತಲೆಮಾರಿನ ಮನಸ್ಸುಗಳು ತಮ್ಮ ಪ್ರತಿಭೆ ಮತ್ತು ವಿದ್ವತ್ತಿನ ಧಾರೆಯರೆದು ಬೆಳೆಸಿವೆ. ಬೇರೆ ಬೇರೆ ಪಂಥದ ಮತ್ತು ಸಿದ್ಧಾಂತಗಳ ಹಿನ್ನೆಲೆಯ ವಿಮರ್ಶಕರು ಅದನ್ನು ರೂಪಿಸಿದ್ದಾರೆ.

ಯಾವುದೇ ಸಾಹಿತ್ಯ ಪ್ರಕಾರದ ಒಂದು ಪರಂಪರೆಯು ಹೀಗೆ ಬಹು ತಲೆಮಾರಿನ, ಬಹುಸಿದ್ಧಾಂತದ ಬಹುಪಂಥಗಳ ಶಕ್ತಿ ಮತ್ತು ಮಿತಿಗಳನ್ನು ಪಡೆದುಕೊಂಡೆ ರೂಪುಗೊಂಡಿರುತ್ತದೆ. ಈ ಅರ್ಥದಲ್ಲಿ ಕನ್ನಡ ವಿಮರ್ಶೆಯು ಸಾಹಿತ್ಯಕವಾಗಿ, ತಾತ್ವಿಕವಾಗಿ, ಸಾಂಸ್ಕೃತಿಕವಾಗಿ ಬಹುರೂಪಿಯಾಗಿದೆ. ಅದರ ಮೊದಲಿಗರನ್ನು ಮರೆಯುವಂತಿಲ್ಲ ಹೀಗಿನವರನ್ನು ಕಡೆಗಣಿಸುವಂತಿಲ್ಲ. ಕನ್ನಡ ವಿಮರ್ಶೆಯ ಆರಂಭಕಾಲದಿಂದ ಹಾಕಿದ ಬುನಾದಿ ಹೊಸ ತಲೆಮಾರಿನ ಕ್ರಿಯಾಶೀಲತೆಗೆ ಮುಖ ತೋರಿಸುತ್ತಿರುತ್ತದೆ. ಹಾಗೆಯೇ ಹೊಸತಲೆಮಾರಿನ ಕ್ರಿಯಾಶೀಲತೆಯನ್ನು ಹಿರಿಕರು ಮಾಡಿದ ಕೆಲಸಗಳನ್ನು ಒಂದು ಶಕ್ತಿಯಾಗಿ ಭಿನ್ನಮತವಾಗಿ ಪ್ರೇರಣೆಯಾಗಿ ಕೆಲಸ ಮಾಡುತ್ತಿರುತ್ತವೆ.

# ಹೊಸ ತಲೆಮಾರಿನ ವಿಮರ್ಶಕರ ಭಾವ ಚಿತ್ರಗಳು



ಡಾ॥ ವಿಕ್ರಮ ವಿಸಾಜಿ



ಡಾ॥ ಬಿ.ಎಂ.ಪುಟ್ಟಯ್ಯ



ಜೋಗಿ



ಡಾ॥ ಜಿ.ಬಿ.ಹರೀಶ



ತಾರಿಣಿ ಶುಭದಾಯಿನಿ. ಆರ್.



ಡಾ॥ ಕವಿತಾ ರೈ

**ಅಭ್ಯಾಸಸೂಚಿ:**

**ಅ. ಮೂಲಗ್ರಂಥಗಳು:**

೦೧. ಕವಿತಾ ರೈ, 'ಅರಿವಿನ ನಡೆ', ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೭

೦೨. ಜೋಗಿ, 'ಜಾನಕಿ ಕಾಲಂ', ಛಂದ ಪ್ರಕಾಶನ, ಬೆಂಗಳೂರು, ೨೦೦೭

೦೩. ತಾರಿಣಿ ಶುಭದಾಯಿನಿ, 'ಹೆಡೆಯಂತಾಡುವ ಸೊಡರು', ರೂಪ ಪ್ರಕಾಶನ, ಮೈಸೂರು, ೨೦೦೭

೦೪. ಬಿ.ಎಂ.ಪುಟ್ಟಯ್ಯ, 'ಕದಡು', ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೮

೦೫. ವಿಕ್ರಮ ವಿಸಾಜಿ, 'ಬೆಳಗಿನ ಮುಖ', ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪

೦೬. ಜಿ.ಬಿ. ಹರೀಶ, 'ಬೆಳಕಿನಾಟ', ಸಂಚಯ ಪ್ರಕಾಶನ, ಬೆಂಗಳೂರು, ೨೦೦೫

**ಆ. ಪರಾಮರ್ಶನ ಗ್ರಂಥಗಳು:**

೦೭. ಇನಾಂದಾರ್ ವಿ.ಎಂ., 'ಪಾಶ್ಚಾತ್ಯ ವಿಮರ್ಶೆಯ ಪ್ರಾಚೀನ ಪರಂಪರೆ', ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ೧೯೮೨

೦೮. ಗಂಗಾಧರ ಕುಷ್ಟಗಿ, 'ತಲೆಮಾರಿನ ತಳಮಳ', ಕವಿತಾ ಪ್ರಕಾಶನ, ರಾಯಚೂರು, ೧೯೯೭

೦೯. ಗೌರೀಶ ಕಾಯ್ಕಿಣಿ, 'ಸಮಗ್ರ ಸಾಹಿತ್ಯ', ಸಂಪುಟ–೪, ವಿಚಾರ–ವಿಮರ್ಶೆ, ಶ್ರೀರಾಘವೇಂದ್ರ ಪ್ರಕಾಶನ, ಅಂಕೋಲಾ, ೧೯೯೬

೧೦. ನಾರಾಯಣ ಕೆ.ವಿ., 'ಸಾಹಿತ್ಯ ವಾರ್ಷಿಕ', ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೪, ೧೯೭೮

೧೧. ಯರವಿನತೆಲಿಮಠ ಸಿ.ಆರ್., 'ಸಾಹಿತ್ಯ ವಿಮರ್ಶೆಯ ಮಾದರಿಗಳು', ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೧೨. ರಹಮತ್ ತರೀಕೆರೆ, 'ಹೊಸತಲೆಮಾರಿನ ತಲ್ಲಣ', ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೩. ರಾಘವೇಂದ್ರರಾವ್ ಹೆಚ್.ಎಸ್., 'ಶತಮಾನದ ಸಾಹಿತ್ಯ ವಿಮರ್ಶೆ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೦

೧೪. ರಾಜಪ್ಪ ದಳವಾಯಿ, 'ಕನ್ನಡ ಸಾಹಿತ್ಯ ಕೋಶ', ಶ್ರೀ ರಾಘವೇಂದ್ರ ಪ್ರಕಾಶನ, ಬೆಂಗಳೂರು, ೨೦೦೬.

೧೫. ರಾಮಚಂದ್ರನ್ ಸಿ.ಎನ್., 'ಸಾಹಿತ್ಯ ವಿಮರ್ಶೆ', ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೨೦೦೮.

೧೬. ವಿಜಯಾ ಸುಬ್ಬರಾಜ್, 'ಸಮಾಲೋಚನ', ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫

೧೭. ಶಂಕರಯ್ಯ ಜಿ., 'ಪಾಶ್ಚಿಮಾತ್ಯ ಸಾಹಿತ್ಯ ವಿಮರ್ಶೆಯ ಪಕ್ಷಿನೋಟ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩.

೧೮. ಶಿವಾನಂದ ಬೇಕಲ್ (ಸಂಪಾದಕ) 'ಸಾಹಿತ್ಯ ಸಮೀಕ್ಷೆ', ಗುಲ್ಬರ್ಗಾ ವಿಶ್ವವಿದ್ಯಾಲಯ, ೨೦೦೫

**ಇ. ಅಪ್ರಕಟಿತ ಗ್ರಂಥಗಳು:**

೦೧. ಸಿಂಧುಶ್ರೀ (ಸಂಶೋಧಕರು) ಪ್ರೊ.ಎ.ವಿ.ನಾವಡ (ಮಾರ್ಗದರ್ಶಕರು), 'ಜೋಗಿಯವರ ಕಥನದಲ್ಲಿ ನವ್ಯೋತ್ತರ : ಆಶಯ', ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಕೆಯಾದ ಎಂ.ಫಿಲ್. ಸಂಪ್ರಬಂಧ, ೨೦೦೯

೦೨. ಸುನೀತಾ (ಸಂಶೋಧಕರು), ಡಾ. ಅರ್ಜುನಪುರಿ ಅಪ್ಪಾಜಿಗೌಡ (ಮಾರ್ಗದರ್ಶಕರು), 'ನವೋದಯ ಕಾಲದ ಕನ್ನಡ ವಿಮರ್ಶೆ', ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಕೆಯಾದ ಎಂ.ಫಿಲ್. ಸಂಪ್ರಬಂಧ, ೨೦೦೮-೦೯.

**ಈ. ಪತ್ರಿಕೆಗಳು**

೦೧. ರಾಮಕೃಷ್ಣ ಜಿ., (ಸಂಪಾದಕ), 'ಹೊಸತು' ಮಾಸಿಕ, ಸಂಪುಟ : ೪ ಸಂಚಿಕೆ :೬ ಜನವರಿ ೨೦೦೩

೦೨. ವಿವೇಕ ಶಾನಭಾಗ (ಸಂಪಾದಕ) 'ದೇಶಕಾಲ' ವಿಶೇಷ ಸಂಚಿಕೆ, ಬೆಂಗಳೂರು, ೨೦೧೧

**ಉ. ಬ್ಲಾಗುಗಳು:**

೧. ರಹಮತ್ ತರೀಕೆರೆ, ಹೊಸತಲೆಮಾರಿನ ಲೇಖಕರು (ಅಂಕಣ) ಕೆಂಡಸಂಪಿಗೆ ಮಾಸಿಕ, ಆಗಸ್ಟ್, ೨೦೦೧ (www. kendasampige.com),

೨. www.avadhiwordpress.com

೩. www. Jogeemaneblogspot.com

